# ಭವಿಷ್ಯವಾಚನ

ಜಿ. ಟಿ. ನಾರಾಯಣ ರಾವ್



# ಭವಿಷ್ಯವಾಚನ

ಜಿ. ಟಿ. ನಾರಾಯಣರಾವ್

೧೯೬೨

ದತ್ತಾತ್ರೇಯ ಪ್ರಕಾಶನ :: ಮಂಗಳೂರು

BHAVISHYAVAACHANA a booklet in Kannada on *Future Reading*, i.e., astrology. Author : G. T. Narayana Rao, 8 Athree, Kamakshi Hospital Road. Kuvempunagar, Mysore 570023. Phone 25759, 37952. Illustrations by Natyacharya K. Muralidhara Rao. Cover design by B. Basavaraju Printed at Harsha Printers, Fifteenth Cross, Basaveswara Road, Mysore 570004. Phone 33176. Published by Dattatreya Prakasana. Athree Book Centre, Saravati building, Balmatta, Mangalore 575001. Phone 21761. Pages 140 and 8 illustrations. First edition released in November 1992.

 Rs 15

## ದತ್ತಾತ್ರೇಯ ಪ್ರಕಾಶನದ ಪ್ರಕಟಣೆಗಳು

೧ ನೋಡೋಣುಬಾರಾ ನಕ್ಷತ್ರ ರೂ ೨೦
೨ ಶ್ರುತಗಾನ ರೂ ೧೨
೩ ಚಕ್ರವರ್ತಿಗಳು ರೂ ೧೩
೪ ಪದಾರ್ಥ ಚಿಂತಾಮಣಿ ರೂ ೨೦
೫ ಪ್ಲಾಂಕ್ ಐನ್‌ಸ್ಟೈನ್ ಬೋರ್ ರೂ ೧೫
೬ ಬೈಜಿಕ ವಿದ್ಯುತ್ತು ರೂ ೧೨
೭ ಜಾತಕ ಮತ್ತು ಭವಿಷ್ಯ ರೂ ೬
೮ ಸೂರ್ಯನ ಸಾಮ್ರಾಜ್ಯ ರೂ ೧೦.೫೦
೯ ಭವಿಷ್ಯವಾಚನ ರೂ ೧೫
೧೦ ಭವಿಷ್ಯ ವಿಜ್ಞಾನ (ಮುಂದಿನದು)

ಕ್ರಮಸಂಖ್ಯೆ ೩ನೆಯ ಪುಸ್ತಕದ ಲೇಖಕ ಜಿ. ಎನ್. ಅಶೋಕವರ್ಧನ ; ೪ ಪಾ. ವೆಂ. ಆಚಾರ್ಯ ; ೬ ಜೆ. ಆರ್. ಲಕ್ಷ್ಮಣರಾವ್ ; ಉಳಿದವುಗಳ ಲೇಖಕ ಜಿ. ಟಿ. ನಾರಾಯಣರಾವ್

ವರ್ತಮಾನದಲ್ಲಿ ಕ್ರಿಯಾಶೀಲವಾಗಿ ಬಾಳುತ್ತ ಭವಿಷ್ಯವನ್ನು ರೂಪಿಸುತ್ತ ಮುನ್ನಡೆಯುತ್ತಿರುವ ಸಂಸ್ಥೆ

ದತ್ತಾತ್ರೇಯ ಪ್ರಕಾಶನ
ಅತ್ರಿ ಬುಕ್ ಸೆಂಟರ್ * ಶರಾವತಿ ಕಟ್ಟಡ * ಬಲ್ಮಠ
ಮಂಗಳೂರು ೫೭೫ ೦೦೧
ದೂರವಾಣಿ ೨೧೭೬೧

# ನಿವೇದನೆ

**ಪ್ರೊ ಕೆ. ರಾಮಕೃಷ್ಣ ಉಡುಪ**

**ಪ್ರೊ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್**

ಇವರುಗಳಿಗೆ ನಿಡುಗಾಲದ ನಿರ್ವ್ಯಾಜ ಸ್ನೇಹದ ದ್ಯೋತಕವಾಗಿ

ಪಡೆಗುಂ ಮಹಿಮೋನ್ನತಿಯುಂ
ಪಡೆಗುಂ ಸನ್ಮಾರ್ಗದೆಸಕಮಂ ಗುಣದೊಳ್ಪಂ
ಪಡೆಗುಂ ನಿರ್ಮಳಯಶಮಂ
ಪಡೆಗುಂ ಪಡೆಗುಂ ವಿಭುತ್ವಮಂ ಬುಧಸಂಗಂ

ನಾಗವರ್ಮ

## ಸೃಜನಶೀಲತೆ ಮತ್ತು ಸಂದೇಹದೃಷ್ಟಿ

ವಿಜ್ಞಾನಿಗಳು ಕೂಡ ಮೂಲತಃ ಮನುಷ್ಯರೇ, ರಾಗದ್ವೇಷಗಳು ಉದ್ರೇಕಿಸಲ್ಪಟ್ಟಾಗ ಅವರು ತಮ್ಮ ಶಿಸ್ತಿನ ಆದರ್ಶಗಳನ್ನು ತಾತ್ಕಾಲಿಕವಾಗಿ ವರ್ಜಿಸುವುದುಂಟು. ಇದು ಹೇಗೂ ಇರಲಿ. ಈ ಆದರ್ಶಗಳು—ವೈಜ್ಞಾನಿಕ ವಿಧಾನ—ಅಗಾಧ ಪರಿಣಾಮಕಾರಿಗಳೆಂದು ರುಜುವಾತಾಗಿವೆ. ಪ್ರಪಂಚ ವಾಸ್ತವವಾಗಿ ಹೇಗೆ ಕೆಲಸಮಾಡುತ್ತದೆಂಬುದನ್ನು ಪತ್ತೆ ಹಚ್ಚಲು ಅನುಮಾನಗಳು, ಅಂತರ್ಬೋಧೆ ಮತ್ತು ಜ್ವಲಂತ ಸೃಜನಶೀಲತೆ ಇವುಗಳ ಬೆಸುಗೆ ಅಗತ್ಯ. ಪ್ರತಿಯೊಂದು ಹಂತದಲ್ಲಿ ಸಂದೇಹಯುತ ವಿಮರ್ಶೆಯೂ ಆವಶ್ಯ. ಸೃಜನಶೀಲತೆ ಮತ್ತು ಸಂದೇಹದೃಷ್ಟಿ ಇವೆರಡರ ನಡುವಿನ ಕರ್ಷಣವೇ (tension) ವಿಜ್ಞಾನದ ಪರಮಾದ್ಭುತ ಮತ್ತು ಅನಿರೀಕ್ಷಿತ ಶೋಧನೆಗಳ ಮೂಲ. ವಿಜ್ಞಾನದ ಗಡಿಗೆರೆಯಲ್ಲಿರುವ ಚಿಂತನಪ್ರಕಾರಗಳ ಸಿದ್ಧಿ ಸಾಧನೆಗಳೇನಿದ್ದರೂ ಅವು ನಿಜವಿಜ್ಞಾನದ ಈಚಿನ ದಿನಗಳ ನೂರಾರು ಚಟುವಟಿಕೆಗಳ ಮತ್ತು ಆವಿಷ್ಕಾರಗಳ ಎದುರು ಮಸಳ ಮಸಕಾಗಿ ಹೋಗುವುವೆಂದು ನನ್ನ ಅಭಿಪ್ರಾಯ.

ಕಾರ್ಲ್ ಸಗಾನ್

ಟಿಪ್ಪಣಿ : ಪರಮನೋವಾಚನ, ಇಂದ್ರಿಯಾತೀತ ಪ್ರಜ್ಞೆ, ಭೌತಾತೀತ ಬಲಗಳ ಅಸ್ತಿತ್ವ, ಮನೋವೇಗ ಮುಂತಾದವು ವಿಜ್ಞಾನದ ಗಡಿಗೆರೆಯಲ್ಲಿರುವ ಚಿಂತನಪ್ರಕಾರಗಳು. ಇವುಗಳ ಪ್ರವರ್ತಕರು ಘೋಷಿಸುವ ಫಲಿತಾಂಶಗಳ ಬಗ್ಗೆ ಜನ ಬಲು ಎಚ್ಚರಿಕೆ ವಹಿಸುವುದು ಅಗತ್ಯ. ವಿಜ್ಞಾನದ ಪರಿಭಾಷೆಯನ್ನೂ ಕೆಲವೊಂದು ಫಲಿತಾಂಶಗಳನ್ನೂ ಸಂದರ್ಭಾತೀತವಾಗಿ ಬೆರೆಸಿ ಮುಗ್ಧ ಜನರನ್ನು ವಂಚಿಸುವುದೇ ಹೆಚ್ಚಿನವುಗಳ 'ಘನ' ಉದ್ದೇಶ.

---

ಮೂಢತೆಯಂ ಬಿಟ್ಟು ಪೆಱರ್<br>
ಮಾಡುವ ಜೊಂಬಿಂಗೆ ಬೇಗವೇಱಿಗದೆ ಮೂರ್ಖರ್<br>
ಮಾಡುವುದಂ ಲೇಸೆನ್ನದೆ<br>
ಕೂಡುವುದಾರಯ್ದು ಮೂಢ ದೃಷ್ಟಿಯೊಳಱಿವಂ

ನಯಸೇನ

# ಅರಿಕೆ

'ಜಾತಕ ಮತ್ತು ಭವಿಷ್ಯ' ಎನ್ನುವ ಕಿರುಹೊತ್ತಗೆ ಪ್ರಕಟಿಸಿದಾಗ, ೧೯೯೧, ಮನಸ್ಸಿನಲ್ಲಿ ಒಂದು ಅತೃಪ್ತಿ ಉಳಿದಿತ್ತು : ಅದರಲ್ಲಿ ಒದಗಿಸಲಾದ ಮಾಹಿತಿ, ಸಾಕ್ಷ್ಯಾಧಾರ, ತರ್ಕ ಮುಂತಾದವು ಇನ್ನಷ್ಟು ವಿಸ್ತಾರ ಮತ್ತು ವಿವರಣಾತ್ಮಕವಾಗಬಹುದಿತ್ತೋ ಏನೋ ! ಅನೇಕ ಮಂದಿ ಓದುಗರೂ ಇದೇ ಅಭಿಪ್ರಾಯ ವ್ಯಕ್ತಪಡಿಸಿದಾಗ—ಈ ವೇಳೆಗೆ, ೧೯೯೨, ಹೊತ್ತಗೆಯ ದ್ವಿತೀಯ ಮುದ್ರಣ ಚಲಾವಣೆಯಲ್ಲಿತ್ತು— ಹೊಸತೇ ಆದ ಒಂದು ಪುಸ್ತಕ ಬರೆಯುವುದು ಅನಿವಾರ್ಯವಾಯಿತು. ಹೀಗೆ ಭೂತದಲ್ಲಿ ಬರೆದ 'ಭವಿಷ್ಯ ವಾಚನ' ವರ್ತಮಾನಕ್ಕೆ ಕಾಲಿಡುತ್ತಿದೆ. ಬೇಂದ್ರೆಯವರು ಬರೆದಿರುವಂತೆ

> ನಾಳೆ ಎಂಬುವದು ನಿನ್ನಿನ ಮನಸು
> ಮುಂದೆ ಎಂಬುವದು ಇಂದಿನ ಕಣಸು
> ಭೂತದಿಂದಲೇ ಭಾವವು ಬಂತು
> ಭಾವವಿಲ್ಲದೇ ಉದ್ಭವವೆಂತು !

೨

ಈ ಪುಸ್ತಕ ಓದುವ ಮುನ್ನ ಕೆಲವು ಪಾರಿಭಾಷಿಕ ಪದಗಳ ಬಗ್ಗೆ ತುಸು ವಿವರಣೆ ಅಗತ್ಯ :

* ಖಗೋಳವಿಜ್ಞಾನ. ಇದು astronomy— ಆಕಾಶಕಾಯಗಳ, ಸಮಗ್ರವಾಗಿ ವಿಶ್ವದ (universe), ವೈಜ್ಞಾನಿಕ ಅಧ್ಯಯನ. ಯಾವುದೇ ವಿದ್ಯಮಾನ(phenomenon), ಘಟನೆ (event) ಅಥವಾ ಪರಿಣಾಮ (effect) ಪ್ರಕಟವಾಗಲು ಕಾರಣ (cause) ಇದ್ದೇ ಇದೆ. ಆ ಕಾರಣದ ಶೋಧನೆಯೇ ವೈಜ್ಞಾನಿಕ ಅಧ್ಯಯನ. ವೀಕ್ಷಣೆ, ವಿಶ್ಲೇಷಣೆ, ತರ್ಕ, ಊಹೆ, ಸಿದ್ಧಾಂತ ಮತ್ತು ಅಂತಿಮವಾಗಿ ಪ್ರಯೋಗ ಇದರ ಅಸ್ತ್ರಗಳು. ಪ್ರಯೋಗ ದಲ್ಲಿ ಉತ್ತೀರ್ಣವಾಗದ ಯಾವುದೇ ಸಿದ್ಧಾಂತ, ತರ್ಕ, ವಾದ ಅಥವಾ ಚಮತ್ಕಾರ ವಿಜ್ಞಾನವೆನ್ನಿಸದು.

* ಫಲಜ್ಯೋತಿಷ್ಯ. ಇದು astrology. ವ್ಯಕ್ತಿಯ ಜನನಕ್ಷಣದಲ್ಲಿ ನಿರ್ದಿಷ್ಟ ಆಕಾಶಕಾಯಗಳ ವಿನ್ಯಾಸ ಆತನ ಭವಿಷ್ಯದ ಘನೀಭವಿತರೂಪ

ಎಂಬ ನಂಬಿಕೆ. ಹೀಗೆ ಆಕಾಶಕಾಯ-ವ್ಯಕ್ತಿಭವಿಷ್ಯ ನಡುವಿನ ಅವಿನಾ ಸಂಬಂಧ ನಾಗರಿಕತೆಯ ಮೊದಲ ದಿನಗಳಿಂದಲೂ ಬೆಳೆದು ಅಭಿವರ್ಧಿಸಿ ಬಂದು ವರ್ತಮಾನ ಕಾಲದಲ್ಲಿ ಜನತೆಯ ಮೇಲೆ ಒಂದು ತೆರನಾದ ಸಂಮೋಹ ಕಾಸ್ತ್ರ ಬೀರಿದೆ: ಹಳತಾದದ್ದು, ಆ ಕಾರಣದಿಂದಲೇ, ಚಿರವಾದದ್ದು ಕೂಡ !

* ಗ್ರಹ. ಇದಕ್ಕೆ ಎರಡು ಅರ್ಥಗಳಿವೆ. (೧) ಖಗೋಳವಿಜ್ಞಾನದಲ್ಲಿ ಇದು planet—ನಕ್ಷತ್ರದ ಸುತ್ತ ಪರಿಭ್ರಮಿಸುತ್ತಿರುವ ಅನಕ್ಷತ್ರ (ನಕ್ಷತ್ರ ವಲ್ಲದ) ಘನವಸ್ತು. ಸೂರ್ಯನನ್ನು (ಇದು ನಮ್ಮ ಖಾಸಾ ನಕ್ಷತ್ರ), ಈಗ ತಿಳಿದಿರುವಂತೆ, ಒಂಬತ್ತು ಗ್ರಹಗಳು ಪರಿಭ್ರಮಿಸುತ್ತಿವೆ : ಬುಧ, ಶುಕ್ರ, ಭೂಮಿ, ಕುಜ, ಗುರು, ಶನಿ, ಯುರೇನಸ್, ನೆಪ್ಚ್ಯೂನ್, ಪ್ಲೂಟೋ. ಸೂರ್ಯ ಪ್ರಕಾಶವನ್ನು ಪ್ರತಿಫಲಿಸಿ ಗ್ರಹ ಬೆಳಗುತ್ತದೆ. (೨) ಫಲಜ್ಯೋತಿಷ್ಯದ 'ನವಗ್ರಹ'ಗಳಿವು : ಸೂರ್ಯ, ಚಂದ್ರ ಕುಜ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು. ಆದ್ದರಿಂದ ಓದುಗರು ಸಂದರ್ಭ ಅರಿತು 'ಗ್ರಹ' ಪದದ ಅರ್ಥ ಗ್ರಹಿಸಬೇಕೆಂದು ವಿನಂತಿ. ಇಲ್ಲವಾದರೆ ಗ್ರಹಭೇದವಾಗಿ ಅರ್ಥಕ್ಷಯ ವಾದೀತು, ಗೃಹಭಂಗವೂ ಆದೀತು !

* ಜಾತಕ. ಇದು ಆ ವ್ಯಕ್ತಿಯ horoscopeನ್ನೂ ವ್ಯಕ್ತಿಯನ್ನೂ ಸೂಚಿ ಸುವ ಪದ. ವ್ಯಕ್ತಿಯ ಜನನ ಕ್ಷಣ ಮತ್ತು ಸ್ಥಳ(ಅಂದರೆ ರೇಖಾಂಶ ಮತ್ತು ಅಕ್ಷಾಂಶ) ಕುರಿತಂತೆ 'ನವಗ್ರಹ'ಗಳ ಹಾಗೂ 'ಲಗ್ನ'ದ ವಿನ್ಯಾಸಗಳನ್ನು ನಿರ್ದಿಷ್ಟ ರೀತಿಯಲ್ಲಿ ಬಿಂಬಿಸುವ ದಾಖಲೆ. ಇದರ ತಯಾರಿಕೆ ಕೇವಲ ಯಾಂತ್ರಿಕ (mechanical). ಎಂದೇ ಇಂದು ಜಾತಕಲೇಖನ ಕೂಡ ಗಣಕದ (computer)ಹಿಂಗದ ಹಸಿವಿಗೆ ಸುಲಭ ಗ್ರಾಸವಾಗಿದೆ ! ಗಣಕೀಕೃತ ಜಾತಕವಾಚಕರಿಗೆ ಕೋರಿದ ವರವೀಯುವ ಕಲ್ಪದ್ರುಮವಾಗಿದೆ !

* ಭವಿಷ್ಯವಾಚನ. ಜಾತಕ ಓದಿ (ಅಭ್ಯಸಿಸಿ) ಆ ಜಾತಕನ (ವ್ಯಕ್ತಿಯ) ಜೀವನವೃತ್ತಾಂತವನ್ನು—ವಿಶೇಷವಾಗಿ ಭವಿಷ್ಯವನ್ನು—ವಿವರಿಸುವ/ಊಹಿ ಸುವ/ಕಣಿನುಡಿಯುವ/ಮುನ್ನುಡಿಯುವ ಮನೋವ್ಯಾಪಾರ. ಇದು ವಿಜ್ಞಾನ ವಲ್ಲ—ಅವಿಜ್ಞಾನ, ಅವಿದ್ಯೆ ಮತ್ತು ವಂಚನೆ.

೩

'ಜ್ಯೋತಿಷ' ಎನ್ನುವ ಲೇಖನದಲ್ಲಿ (ಕನ್ನಡ ವಿಶ್ವಕೋಶ ಸಂಪುಟ ೮ ಪುಟ ೪೫೦) ಬಿ. ವಿ. ರಾಮನ್ ಬರೆದಿದ್ದಾರೆ : "ಜ್ಯೋತಿಯನ್ನು, ಗ್ರಹ

ನಕ್ಷತ್ರಗಳನ್ನು ಕುರಿತ ಶಾಸ್ತ್ರ (ಅಸ್ಟ್ರಾಲಜಿ) [ಫಲಜ್ಯೋತಿಷ್ಯ]. ಈ ಶಾಸ್ತ್ರದಲ್ಲಿ ಎರಡು ವಿಭಾಗಗಳುಂಟು. ಒಂದು ಖಗೋಳವಿಜ್ಞಾನ; ಮತ್ತೊಂದು ಭವಿಷ್ಯಾವಧಾನ ಅಥವಾ ಫಲಜ್ಯೋತಿಷ. ಫಲಜ್ಯೋತಿಷಕ್ಕೆ ಖಗೋಳ ವಿಜ್ಞಾನ ಆಧಾರ. ಎರಡನ್ನೂ ಒಟ್ಟಾರೆಯಾಗಿ ಪ್ರತ್ಯಕ್ಷ ಪ್ರಮಾಣವಾದ ಶಾಸ್ತ್ರ ಎನ್ನುತ್ತಾರೆ. ಖಗೋಳಶಾಸ್ತ್ರದ ಗ್ರಹ ನಕ್ಷತ್ರ ಮುಂತಾದವು ನೇರ ವಾಗಿ ಪ್ರತ್ಯಕ್ಷ ಕಣ್ಣಿಗೆ ಕಾಣುವುವು. ಫಲಜ್ಯೋತಿಷ ಅನುಭವಪ್ರತ್ಯಕ್ಷ. ಕಣ್ಣಿಗೆ ಕಾಣುವುದನ್ನು ಆಧರಿಸಿ ಅನುಭವಕ್ಕೆ ಕಾಣಬರುವುದನ್ನು ಜ್ಯೋತಿಷ ಅವ ಧಾನ ಮಾಡುತ್ತದೆ. ಭೂಮಿಯ ಚರಾಚರ ವರ್ಗಗಳ ಆಗುಹೋಗುಗಳ ಮೇಲೆ ಗ್ರಹ ನಕ್ಷತ್ರಾದಿ ಆಕಾಶಕಾಯಗಳು ಬೀರುವ ಪ್ರಭಾವದ ಸಮ್ಯಗ್ ದರ್ಶನವನ್ನು ಜ್ಯೋತಿಷ ಮಾಡಿಕೊಡಲೆಳಸುತ್ತದೆ......"

ಗಗನ ವಿದ್ಯಮಾನಗಳಿಗೂ ವ್ಯಕ್ತಿ ಚಟುವಟಿಕೆಗಳಿಗೂ ಕೊಂಡಿ ಬೆಸೆ ಯುವ ಶಾಸ್ತ್ರ ಫಲಜ್ಯೋತಿಷ್ಯ, ಮತ್ತು ಈ ಕೊಂಡಿಯ ನೆರವಿನಿಂದ ಆತನ ಭವಿಷ್ಯವನ್ನು ಕಣಿನುಡಿಯಬಹುದು ಎಂಬುದು ಸಾರಾಂಶ.

ಇಂಥ ಒಂದು 'ಯುಗಪ್ರವರ್ತಕ ಹನುಮಂತನೆಗೆತ'ವನ್ನು (epoch-making giant leap) ಫ್ರೆಂಚ್ ಮನೋವಿಜ್ಞಾನಿ ಮೈಕಲ್ ಗಾಕ್ವೆ ಲಿನ್ ಮಾಡಿದ್ದಾರೆ: ವಿನೂತನ ವಿಚಿತ್ರ ಸಂಖ್ಯಾಕಲನವಿಜ್ಞಾನಾಧಾರಿತ (statistics–based) ವೈಜ್ಞಾನಿಕ ಫಲಜ್ಯೋತಿಷ್ಯದ ಪ್ರವರ್ತಕರಿವರು, ವರ್ತಮಾನ ಶತಮಾನದ ಶಿಶು. ಇವರು ಹಲವು ನೂರು ವಿಭಿನ್ನ ವ್ಯಕ್ತಿಗಳ ವೈಲಕ್ಷಣ್ಯಗಳನ್ನು ಮನೋವೈಜ್ಞಾನಿಕವಾಗಿ ಅಭ್ಯಸಿಸಿ ಶಿಷ್ಟೀಕರಿಸಿ ವರ್ಗೀಕರಿ ಸಿದರು; ಬಳಿಕ ಪ್ರತ್ಯೇಕವಾಗಿ,ಅವರವರ ಜಾತಕಗಳಲ್ಲಿಯ ಗ್ರಹ ಸ್ಥಾನಗಳನ್ನೂ ಚಲನೆಗಳನ್ನೂ ನಿರಪೇಕ್ಷ ಪಾತಳಿಯಲ್ಲಿ ವಿಶ್ಲೇಷಿಸಿದರು.ಆಗ ಇವರು ಕಡ್ಡಾಯ ವಾಗಿ ಕಂಡುದನ್ನು ಕೆಲವು ತೀರ್ಮಾನಗಳಾಗಿ ಪ್ರಕಟಿಸಿದ್ದಾರೆ: "... ಕುಜ ಅಥವಾ ಶನಿ ಎರಡು 'ಸಂಧಿಷ್ಠ ವಲಯ'ಗಳ ಪೈಕಿ ಯಾವುದೇ ಒಂದರಲ್ಲಿರು ವಾಗ—ಈ ಗ್ರಹ ಆದಾಗ ತಾನೇ ಮೂಡಿರಬೇಕು ಅಥವಾ ಇದರ ದೈನಂದಿನ ಪಥದಲ್ಲಿಯ ಅತ್ಯುನ್ನತ ಬಿಂದುವನ್ನು ಆದಾಗ ತಾನೇ ಅಡ್ಡ ಹಾಯ್ದಿರಬೇಕು—ಸುಪ್ರಸಿದ್ಧ ವೈದ್ಯರು ಜನಿಸುವ ಪ್ರಾಯಿಕತೆ (likeli-hood) ಅಧಿಕ, ಕುಜ ಅಥವಾ ಗುರು ಸಂಧಿಷ್ಠ ವಲಯದಲ್ಲಿರುವಾಗ ಜನಿಸು ವವರು ಸೇನಾಧುರೀಣರಾಗುವ ಪ್ರವೃತ್ತಿ ಪ್ರದರ್ಶಿಸುತ್ತಾರೆ. 'ವಜ್ರದೃಢ

ಮನ'ವಿರುವ ಶ್ರೇಷ್ಠ ಕ್ರೀಡಾಪಟುಗಳು ಕುಜಸಂಬಂಧಿಗಳಾಗಿರುವರು. 'ದುರ್ಬಲಮನ'ದವರು ತದ್ವ್ಯತಿರಿಕ್ತ. ಬಹಿರ್ಮುಖಿಗಳು ಕುಜದ ಅಥವಾ ಗುರುವಿನ 'ಪ್ರಭಾವ'ದಲ್ಲಿ ಹುಟ್ಟುವುದು ವಾಡಿಕೆ. ಅಂತರ್ಮುಖಿಗಳಾದರೋ ಶನಿಯ 'ಪ್ರಭಾವ'ದಲ್ಲಿ ಹುಟ್ಟುತ್ತಾರೆ. ಸೈನಿಕರ ಮತ್ತು ಸಂಗೀತಗಾರರ ಗ್ರಹ ಪ್ರರೂಪಗಳು ಬೇರೆ ಬೇರೆ. ಆದರೆ ಸೇನಾಸಂಗೀತದಲ್ಲಿ ಪರಿಣಿತರಾಗುವ ಸಂಗೀತಗಾರರು ಇವೆರಡು ಗುಂಪುಗಳ ನಡುವೆ ಇರುತ್ತಾರೆ......"

ಇಲ್ಲದ ಸೂತ್ರವನ್ನು ಅರಸ ಹೊರಟಾಗ, ಮನಬಯಸಿದ್ದನ್ನು ಕಣ್ಣು ಕಾಣುವುದೂ ತರ್ಕ (ಅಥವಾ ವಿತಂಡವಾದ) ನೆರವಿಗೆ ಒದಗುವುದೂ ಮಾನವಮತಿಯ ಅದಮ್ಯ ಸೃಜನಶೀಲತೆಯ ಇನ್ನೊಂದು ಮುಖ. ಈ ಸೃಜನಶೀಲತೆ ವ್ಯಕ್ತಿಯ ಹತವೀರ್ಯತೆಗೆ ಕಾರಣವಾಗುವುದೊಂದು ಘೋರ ದುರ್ದೈವ.

೪

ಫಲಜ್ಯೋತಿಷ್ಯ ಕುರಿತಂತೆ ಪೌರಸ್ತ್ಯ ಪಾಶ್ಚಾತ್ಯ ಅಥವಾ ಪ್ರಾಚೀನ ಅರ್ವಾಚೀನ ವಾಙ್ಮಯ ಯಾವುದನ್ನೇ ಎಷ್ಟೇ ಸಹಾನುಭೂತಿ, ನಿರಪೇಕ್ಷ ಮನೋಭಾವ, "ಇದರಲ್ಲಿ ಸತ್ಯವನ್ನೇ ಕಾಣುತ್ತೇನೆ" ಎಂಬ ದೃಢ ಸಂಕಲ್ಪಬದ್ಧನಾಗಿ ಅಭ್ಯಸಿಸಿದರೂ ಅನಿವಾರ್ಯವಾಗಿ ಅನುಗತವಾಗುವ ಆಧಾರಭಾವನೆಗಳು ಮುಖ್ಯವಾಗಿ ನಾಲ್ಕು. ಅಂದರೆ, ಈ ಚತುಶ್ಶಿಲಾ ಪಾಯದ ಮೇಲೆ ಅದನ್ನು ನಿಲ್ಲಿಸಲಾಗಿದೆ :

* ಭಗವಂತನ ಎರಕವಾದ ಮಾನವನ ಭೂತ ವರ್ತಮಾನ ಭವಿಷ್ಯಗಳನ್ನು ಅದೇ ಭಗವಂತನ ನಿರ್ಮಿತಿಗಳಾದ ಆಕಾಶಕಾಯಗಳು ನಿರ್ಧರಿಸಿ ಗರ್ಭೀಕರಿಸಿಕೊಂಡಿವೆ.

* ಪ್ರಾಚೀನ ಚಿಂತನಶೀಲರು ಅನುಭಾವಿಗಳು, ದೇವಮಾನವರು, ಭಗವದ್ವಾಣಿಗೆ ಮಾಧ್ಯಮಗಳಾಗಿ ಅವತರಿಸಿದ ಸಂತರು, ಪ್ರವಾದಿಗಳು ಮೊದಲಾದ ಯುಗ ಪ್ರತಿಭಾವಂತರು ಈ ಸೂಕ್ಷ್ಮ ಸಂಬಂಧಗಳನ್ನು ಗಮನಿಸಿ ಗ್ರಹಿಸಿ ಅರ್ಥವಿಸಿ ಮಂತ್ರ, ಸೂಕ್ತಿ, ವಚನ ಮುಂತಾದ ಅನುಭಾವವಾಙ್ಮಯ ಪ್ರಕಾರಗಳಲ್ಲಿ ಘನಿಸಿಟ್ಟಿದ್ದಾರೆ.

* ಆಯಾ ಕಾಲದಲ್ಲಿ ಈ ವಾಙ್ಮಯವನ್ನು ನಿಷ್ಠೆಯಿಂದ ಅಭ್ಯಸಿಸಿ

ಯಥಾಮತಿ ಯಥಾಶಕ್ತಿ ವ್ಯಾಖ್ಯಾನ ನೀಡುವವರ ಸಾಮರ್ಥ್ಯ ಮತ್ತು ಅದನ್ನು ಆಲಿಸುವವರ ಅರ್ಹತೆ ಪ್ರಕಾರ ಸತ್ಯ ಸಾಕ್ಷಾತ್ಕಾರವಾಗುತ್ತದೆ. ವಾಣಿಗಳು ನೂರಿರಬಹುದು, ವಿಧಾನಗಳು ಸಾವಿರವಿರಬಹುದು—ಆದರೆ ಋತ ಒಂದೇ.

* ಚಿರಂತನ ಪರಾತ್ಪರ ಶಕ್ತಿಯಿಂದ ಮಾನವ ಕಲ್ಯಾಣಾರ್ಥ ಧರೆಗಿಳಿದು ಬಂದ ಫಲಜ್ಯೋತಿಷ್ಯವನ್ನು ನಶ್ವರ ಮತ್ತು ಚಂಚಲ ಮಾನವಸೃಷ್ಟಿಯಾದ ವಿಜ್ಞಾನದ ಸೀಮಿತ ಮಾನದಂಡಗಳಿಂದ, ಅಪಕ್ವ ಪ್ರಯೋಗಗಳಿಂದ ಇಲ್ಲವೇ ಅಪರಿಪೂರ್ಣ ಸಿದ್ಧಾಂತಗಳಿಂದ ಅಳೆಯತಕ್ಕದ್ದಲ್ಲ : ಅನಂತವನ್ನು ಸಾಂತ, ಸಮಷ್ಟಿಯನ್ನು ವ್ಯಷ್ಟಿ ಅಥವಾ ಸಮಗ್ರತೆಯನ್ನು ವಿವಿಕ್ತತೆ ಹೇಗೆ ತಾನೇ ಗ್ರಹಿಸಬಲ್ಲವು, ನಿರ್ಧರಿಸಬಲ್ಲವು ಅಥವಾ ಅಳೆಯಬಲ್ಲವು ?

ಇವೆಲ್ಲ ಗಹನ ಪದಸಮುಚ್ಚಯಗಳೂ ರಮ್ಯವಾಗ್ವೈಖರಿಗಳೂ ತರ್ಕಚಮತ್ಕಾರಗಳೂ ನೀಡುವ ನಗ್ನ ಸಂದೇಶ ಒಂದೇ : ಬಿಡು ನಿನ್ನ ಖತಿ ಇಡು ನನ್ನಲ್ಲಿ ಮತಿ ! ಇಲ್ಲಿ 'ನಾನು' ಯಾರು ಗೊತ್ತೇ ? ಸಾಕ್ಷಾತ್ ಫಲಜ್ಯೋತಿಷಿ—ಪ್ರಾಚೀನ ಭಗವಂತನ ಆಧುನಿಕ ಮುಖವಾಣಿ ! "ನಿಮ್ಮ ಬಗೆಗಿನ ಭವ್ಯ ಭವಿಷ್ಯದ ಹೊಂಗನಸಿನ ರಮ್ಯವ್ಯಾಖ್ಯಾನವನ್ನು ನನ್ನಿಂದ ಕೇಳಲೆಂತು ವರ್ತಮಾನವನ್ನು ನನಗೆ ಸೂರೆಗೊಡಿ !"

ಇಲ್ಲಿ ನಾನು(= ಈ ಪುಸ್ತಕದ ಲೇಖಕ) ಯಾವುದೇ ಅಪಮಾಹಿತಿಯನ್ನಾಗಲೀ (disinformation) ಅಪನೀತಿಯನ್ನಾಗಲೀ ಬಿತ್ತರಿಸಲು ಪ್ರಯತ್ನಿಸುತ್ತಿಲ್ಲ, ನಿಮ್ಮ ಪ್ರಾಮಾಣಿಕ ನಂಬಿಕೆಗಳನ್ನು ಕೆದಕಿ ಮನನೋಯಿಸಲು ಉದ್ದೇಶಿಸಿಲ್ಲ, ಅಥವಾ ನಿಮ್ಮಂದ ಆತ್ಮವಿಶ್ವಾಸವನ್ನು ತೊಡೆದುಹಾಕಲು ಇಚ್ಛಿಸುತ್ತಿಲ್ಲ; ಬದಲು, ನೀವು, ನನ್ನ ವಾದವನ್ನೂ ಒಳಗೊಂಡಂತೆ, ಎಲ್ಲವನ್ನೂ ಜ್ಞೇಯನಿಷ್ಠವಾಗಿ (objectively) ಪರಾಂಬರಿಸಿ ಯೋಗ್ಯವೆನಿಸಿದುದನ್ನು ಮಾತ್ರ ಸ್ವಾಂಗೀಕರಿಸಿ ಸದಾ ಚಿಂತನ-ಪ್ರಯೋಗಶೀಲ ಮಾರ್ಗಗಾಮಿಗಳಾಗಿ ನಿಮ್ಮ ಜೀವನದ ಪರಿಪೂರ್ಣ ಸಾಧ್ಯತೆಗಳನ್ನು ಕಂಡುಕೊಳ್ಳಬೇಕೆಂದು ಅಪೇಕ್ಷಿಸುತ್ತೇನೆ. ನೀವು ಅನುಕರಣಶೀಲ ಅನುಯಾಯಿಗಳಾಗತಕ್ಕದ್ದಲ್ಲ, ವಿವೇಕರಹಿತರಾಗತಕ್ಕದ್ದಲ್ಲ, ಅನ್ಯರ ಚಿತ್ತದಾಸರಾಗತಕ್ಕದಲ್ಲ, ಬದಲು, ನಿಸರ್ಗ ನಿಮಗೆ ವರವಾಗಿ ನೀಡಿರುವ ಬುದ್ಧಿಯನ್ನು ಚಲಾಯಿಸಿ ತಾರತಮ್ಯ ಜ್ಞಾನವನ್ನು ನಿರಪೇಕ್ಷ ಪಾತಳಿಯಲ್ಲಿ ಗ್ರಹಿಸಿ ತದನುಗುಣವಾಗಿ ಬದುಕನ್ನು ಹಸನು

ಗೊಳಿಸಿಕೊಳ್ಳತಕ್ಕದ್ದು, ಸುಖಿಗಳಾಗತಕ್ಕದ್ದು. ಬದುಕು ಕ್ಷಣಭಂಗುರ ನಿಜ. ಆದರೆ ಇದು ಅತಿಬಂಧುರ, ಗಹನ ಸುಂದರ ಕೂಡ: ಅವರಿವರ ಮಾತು ಕೇಳಿ ಭಂಗುರತೆಯ ಮಾಯಾಮೃಗ ಹಿಡಿಯುವ ಅಥವಾ ಕೊಲ್ಲುವ ಸಲುವಾಗಿ ಕೈಯಲ್ಲಿರುವ ಬಂಧುರತೆಯನ್ನೂ ಸುಂದರತೆಯನ್ನೂ ವಿನಷ್ಟ ಮಾಡಿಕೊಳ್ಳ ಬೇಡಿ.

೫

ಈ ಪ್ರೇರಣೆ ನನ್ನಲ್ಲಿ ಪ್ರಬಲವಾಗಲು ಕಾರಣವಿವೆ. ಐದು ಸಾಂಕೇತಿಕ ನಿದರ್ಶನಗಳನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ.

* ಆಧುನಿಕ ವಿಜ್ಞಾನ ಮತ್ತು ತಂತ್ರವಿದ್ಯೆ ಓದುತ್ತ ಸುಭದ್ರ ಜೀವನದ ಆಶಯವನ್ನು ಹೊತ್ತಿರುವ ನಮ್ಮ ಯುವಜನಾಂಗ ಬಹುತೇಕ ಎರಡು ಶೋಷಕಗಳ ಅಂಧ ದಾಸರಾಗಿರುವರೆಂಬುದು ನಿಮಗೆ ತಿಳಿದಿದೆಯೇ ? (೧) ಮಾದಕವಸ್ತುಗಳು : ಇವು ಮನಸ್ಸಿಗೂ ದೇಹಕ್ಕೂ ಜಡತ್ವ ತರುವ ಮತ್ತು-ಕಾರಕಗಳು, ಮಿಥ್ಯಾನಂದಕರಿಗಳು; (೨) ಭವಿಷ್ಯವಾಚನ ಸಹಾಯಕಗಳು. ಇವು ವರ್ತಮಾನದ ಕಠೋರವಾಸ್ತವತೆಯನ್ನು ಎದುರಿಸುವಾಗ ಮೂಡುವ ಸಮಸ್ಯೆಯನ್ನು ನಿವಾರಿಸುವ ವೇದನಹಾರಿಗಳು, ಗಾಳಿಗುಂದುರಿಗೆಗಳು,

* Fritjof Capra *The Tao of Physics*, Gary Zukav *The Dancing Wu Li Masters*, John Gribbin and Stephen Plagemann *The Jupiter Effect*, Immanuel Velikovsky *Worlds in Collision*, Bernard Gittleson *Biorhythm* ಇವೇ ಮುಂತಾದ ಪುಸ್ತಕಗಳು ಈ ಆಧುನಿಕ ಗಣಕ-ಆಕಾಶ-ಪರಮಾಣು ಯುಗ ದಲ್ಲಿ ನಮ್ಮ ಸುಶಿಕ್ಷಿತ (?) ಯುವಕ ಯುವತಿಯರನ್ನು ಅತಿಶಯವಾಗಿ ಆಕರ್ಷಿಸಿ ಸಂಮೋಹನಗೊಳಿಸಿರುವುದು ನಿಜಕ್ಕೂ ಅತ್ಯಂತ ಖೇದಕರ ಸಂಗತಿ. ಇನ್ನು ಫ್ಲ್ಯೆಯಿಂಗ್ ಸಾಸರ್ಸ್ (UFOs : Unidentified Flying Objects—ಹಾರಾಡುವ ತಟ್ಟೆಗಳು), ನಾಸ್ತ್ರಡಾಮಸನ ಭವಿಷ್ಯವಾಣಿ, ವ್ಯಕ್ತಿ-ಶುಭಾಶುಭ ಕಾಲ ನಿರ್ಣಾಯಕ ಯಾದಿಗಳು ಇಂಥ ಅಂತೆ-ಕಂತೆ-ಬೊಂತೆಗಳ ಸಂತೆ ಗಮನಿಸುವಾಗ ನಾಗರಿಕತೆ ಒಂದು ಶಾಪವೇ, ಒಂದು ಬಗೆಯ ಮುಗ್ಧಬುದ್ಧಿಮಾಂದ್ಯ ನಿವಾರಿಸಿ ಅದಕ್ಕಿಂತ ತೀವ್ರತರ 'ವೈಜ್ಞಾನಿಕ' ಬುದ್ಧಿಮಾಂದ್ಯ 'ಆವಾಹಿಸುವ' ಷಡ್ಯಂತ್ರವೇ, ನಮ್ಮ ಸಮಸ್ತ ಜ್ಞಾನಪರಂ

ಪರೆಯೂ ವ್ಯಕ್ತಿಯನ್ನು ಅವಿವೇಕದ ಮತ್ತು ಅತಿರೇಕದ ಕಸಾಯಿಖಾನೆಗೆ ಬಲಿಪಶುವಾಗಿಸುವ ಉದ್ದೇಶಯುತವಾದುದೇ ಎಂಬ ಪ್ರಾಮಾಣಿಕ ಸಂದೇಹ ಮೂಡದಿರುವುದು ಅಸಾಧ್ಯ.

ಈ ಜನಪ್ರಿಯ 'ಮೇರುಕೃತಿ'ಗಳಲ್ಲಿ ಸಾಧಾರಣವಾಗಿ ಅನುಸರಿಸಲಾಗುವ ತಂತ್ರವಿದು :

ಆಧುನಿಕ ವಿಜ್ಞಾನದ, ವಿಶೇಷವಾಗಿ ಶಕಲ (ಪರಮಾಣು ಲೋಕ ಕುರಿತ ಅಧ್ಯಯನ) ಮತ್ತು ಸಾಪೇಕ್ಷತಾ (ಬೃಹದ್ವಿಶ್ವ ಕುರಿತ ಅಧ್ಯಯನ) ಸಿದ್ಧಾಂತಗಳ (Quantum theory, Relativity theory) ಪರಿಕಲ್ಪನೆಗಳನ್ನೂ ಪಾರಿಭಾಷಿಕಪದ ಸಮೀಕರಣ ಸೂಕ್ತಿಗಳನ್ನೂ ಸಮೃದ್ಧವಾಗಿ ಬಳಸುವುದು ; ಆಯಾ ಕ್ಷೇತ್ರಗಳಲ್ಲಿ ಹಿರಿ ಹೆಸರುಗಳಾಗಿರುವ ಪ್ಲಾಂಕ್, ಐನ್‌ಸ್ಟೈನ್, ಬೋರ್, ಹೈಸನ್‌ಬರ್ಗ್ ಮೊದಲಾದ ಯುಗಪ್ರವರ್ತಕ ಭೌತ ವಿಜ್ಞಾನಿಗಳ ಜನಪ್ರಿಯ ವಿವರಣೆಗಳನ್ನು ಸಂದರ್ಭಬಾಹಿರವಾಗಿ ಭಾಗಶಃ ಉಲ್ಲೇಖಿಸಿ ತಮ್ಮ ಅನುಕೂಲತಾನುಸಾರ ಅವುಗಳಿಂದ ಅರ್ಥಹಿಂಡುವುದು ; ಪ್ರಪಂಚದ ವಿವಿಧ ಪ್ರಾಚೀನ ನಾಗರಿಕತೆಗಳಿಂದ ಅನುಭಾವ ವಾಙ್ಮಯವನ್ನು ಯಥೋಚಿತವಾಗಿ ಆಯ್ದು ಅದರಲ್ಲಿಯ ಸೂಕ್ತಿಗಳಿಗೂ ಆಧುನಿಕ ಭೌತ ವಿಜ್ಞಾನದಲ್ಲಿಯ ಸೂತ್ರಗಳಿಗೂ ಕೊಂಡಿ ಬೆಸೆದು ಹೇಗೆ ಆ ಪ್ರಾಚೀನ ದ್ರಷ್ಟಾರರು ಇವೆಲ್ಲವನ್ನೂ ಅಂದೇ ತಮ್ಮ ದಿವ್ಯ ದೈವಿಕ ದೃಷ್ಟಿಯಿಂದ ಕಂಡು ವಿವರಿಸಿದ್ದರೆಂದು ವ್ಯಾಖ್ಯಾನಿಸುವುದು ; ಮತ್ತು ಈ ಮಹಾ ಮೂಲಭೂತ ಸಂಶೋಧನೆ ಹೇಗೆ ಪ್ರಾಚೀನಾರ್ವಾಚೀನಗಳನ್ನು ಸಂಪರ್ಕಿಸಿ ಅಖಂಡತೆ ಸ್ಥಾಪಿಸುವ ಸೇತುವೆ ಮತ್ತು ಇದನ್ನು ನಿರ್ಮಿಸಿರುವ ತಾವೆಂಥ 'ದ್ರಷ್ಟಾರ'ರೆಂದು ಬೀಗುವುದು ! ಫಲಿತಾಂಶ ಕಂಡಂತೆಯೇ ಇದೆ : ಲೇಖಕರಿಗೂ ಪ್ರಕಾಶಕರಿಗೂ ಹೊನ್ನಿನ ಮತ್ತು ಹೆಸರಿನ ಸುಗ್ಗಿ ! ಹೊಸ ಹಸುಬೆಗೆ ಲಗ್ಗೆ !

ಗಂಧವನು ತೇದಲ್ಲಿ ಒಂದು ನೊಣವನು ಕಾಣೆ
ಸಂದಿಸಿ ಮಲವ ಬಿಡುವಲ್ಲಿ ನೊಣ ಮುತ್ತು-
ವಂದವ ನೋಡ ಸರ್ವಜ್ಞ !

ಅಚ್ಚುಸಾಲೆಗಳುಂಟು ವೆಚ್ಚಕ್ಕೆ ಹೊನ್ನುಂಟು
ಕಚ್ಚಡವನೋದೆ ಜನ ಸಾಸಿರವುಂಟು
ರೊಚ್ಚೆಯೇ ಅಮೃತ ಅತ್ರಿಸೂನು !

ಅತ್ಯಂತ .ಜನಪ್ರಿಯವಾದ ಮತ್ತು ಇಂದಿಗೂ ಚಲಾವಣೆಯಲ್ಲಿರುವ *Tao af Physics* ಮುನ್ನುಡಿ (೧೯೭೪)ಆರಂಭವಾಗುವುದು ಹೀಗೆ :

"ಐದು ವರ್ಷಗಳ ಹಿಂದೆ ನನಗಾದ ಒಂದು ಸುಂದರ ಅನುಭವ ಈ ಪುಸ್ತಕ ಬರೆಯಲು ಪ್ರೇರಣೆ ನೀಡಿತು. ಬೇಸಗೆಯ ಕೊನೆ ದಿನಗಳ ಆ ಒಂದು ಸಂಜೆ ನಾನು ಕಡಲಕಿನಾರೆಯಲ್ಲಿ ನ್ಯೈಚೆಲ್ಲಿ ಅಲೆಗಳ ಉರುಳಾಟ ಗಮನಿಸು ತ್ತಿದ್ದೆ, ಜೊತೆಯಲ್ಲೇ ನನ್ನ ಉಸಿರಾಟದ ಲಯ ಕೂಡ. ಆ ಗಳಿಗೆ ನನ್ನ ಸುತ್ತಲಿನ ಆವರಣ ಪ್ರಚಂಡ ಬ್ರಹ್ಮಾಂಡನರ್ತನದಲ್ಲಿ (cosmic dance ಜಗನ್ನೃತ್ಯ) ಲಯವಾಗಿರುವ ಅನುಭವ ಹಠಾತ್ತನೆ ಮಿಂಚಿತು. ಅಲ್ಲೆಲ್ಲ ಹರಡಿ ಕೊಂಡಿರುವ ಮರಳು, ಕಲ್ಲು, ನೀರು ಮತ್ತು ವಾಯು ಸದಾ ಕಂಪಿಸುತ್ತಿರುವ ಅಣು ಪರಮಾಣುಗಳಿಂದಾಗಿವೆ. ಇವು ಪರಸ್ಪರ ಅಂತರಕ್ರಿಯೆ ಎಸಗುತ್ತ ಕಣ ಗಳನ್ನು ಸೃಷ್ಟಿಸುತ್ತವೆ ನಾಶಿಸುತ್ತವೆ ಎಂದು ಮುಂತಾಗಿ ಭೌತವಿಜ್ಞಾನಿ ಯಾದ ನನಗೆ ಗೊತ್ತಿದೆ. ನಮ್ಮ ವಾಯುಮಂಡಲವನ್ನು 'ವಿಶ್ವಕಿರಣ' ವೃಷ್ಟಿ ಸಂತತವಾಗಿ ಬಂಬಾಯಿಸುತ್ತಿದೆ. ಈ ಉಚ್ಚಶಕ್ತಿ ಕಣಗಳು ವಾಯುಮಂಡಲ ವನ್ನು ಸೀಳುತ್ತ ಮುನ್ನುಗ್ಗಿದಂತೆ ಅಸಂಖ್ಯ ಢಿಕ್ಕಿಗಳನ್ನು ಎದುರಿಸಬೇಕಾಗು ತ್ತವೆಂಬುದೂ ನನಗೆ ತಿಳಿದಿದೆ. ಉಚ್ಚಶಕ್ತಿ ಭೌತವಿಜ್ಞಾನದಲ್ಲಿ ನಾನು ಮಾಡು ತ್ತಿರುವ ಸಂಶೋಧನೆಯ ಕಾರಣವಾಗಿ ಈ ಎಲ್ಲ ಭಾವನೆಗಳೂ ನನಗೆ ಸುಪರಿ ಚಿತ. ಆದರೆ ಅಲ್ಲಿಯ ತನಕ ನಾನಿವನ್ನು ಆಲೇಖ (graph), ಚಿತ್ರ ಮತ್ತು ಗಣಿತ ಸಿದ್ಧಾಂತಗಳ ಮೂಲಕ ಮಾತ್ರ ಅರಿತಿದ್ದೆ. ಆ ಕಿನಾರೆಯ ಹಾಸಿನಲ್ಲಿ ನಾನು ಕುಳಿತಿದ್ದಾಗ ಈ ಪೂರ್ವಾನುಭವಗಳೆಲ್ಲವೂ ನೆನಪಿಗೆ ಬಂದುವು; ಬಾಹ್ಯಾ ಕಾಶದಿಂದ ಕೆಳಗಿಳಿದು ಧಾವಿಸುವ ಶಕ್ತಿ ನಿರ್ಝರಗಳನ್ನೇ 'ನೋಡಿದೆ' ; ಇವು ಗಳಲ್ಲಿ ಕಣಗಳು ಲಯಬದ್ಧ ಸ್ಪಂದಗಳಲ್ಲಿ ಸೃಷ್ಟಿಗೊಳ್ಳುತ್ತಿದ್ದುವು, ನಾಶ ವಾಗುತ್ತಿದ್ದುವು ; ಧಾತುಗಳ (elements) ಪರಮಾಣುಗಳೂ (atoms) ನನ್ನ ದೇಹದೊಳಗಿನ ಪರಮಾಣುಗಳೂ ಶಕ್ತಿಯ ಈ ಬ್ರಹ್ಮಾಂಡ ನರ್ತನ ದಲ್ಲಿ ಪಾಲ್ಗೊಂಡಿರುವುದನ್ನು 'ಕಂಡೆ'; ಅದರ ಲಯ ನನ್ನ ಅರಿವಿಗೆ ಬಂತು,

ಮತ್ತು ಶಬ್ದ ನಾನು 'ಕೇಳಿದೆ'; ಇದು ಹಿಂದೂಗಳು ಆರಾಧಿಸುವ ನಟರಾಜ ಶಿವನ ನೃತ್ಯಲಾಸ್ಯವೆಂದು ಆ ಗಳಿಗೆ ನನಗೆ ಸ್ಫುರಿಸಿತು."

ಕಾವ್ಯದ ಸಾಲುಗಳೋ ಉಲ್ಲಾಸದ ಉದ್ಗಾರಗಳೋ ಎಂದು ಭಾವಿಸಿ ಇದನ್ನು ಓದಬಹುದು. ಆದರೆ ಈ ಲೇಖಕನ ಹಾಗೂ ಈತನ ಅನುಯಾಯಿಗಳ ಪ್ರಕಾರ ಇದು ಹಾಗಲ್ಲ. ವಿಜ್ಞಾನ—ಅಷ್ಟೇ ಅಲ್ಲ: ವಿಜ್ಞಾನಾತೀತ ಗಹನ ಸತ್ಯ! ಹೀಗೆ ಸಾಧಿಸುವಾತನ ಮನಃಸ್ವಾಸ್ಥ್ಯದ ಬಗ್ಗೆ ಸಂದೇಹ ಮೊಳೆಯುತ್ತದೆ.

ತಾಂಡವ ನೃತ್ಯದ ವಿವಿಧ ಭಂಗಿಗಳಿಗೂ ಪರಮಾಣು ಹೂರಣದ ಎಲೆಕ್ಟ್ರಾನ್ ಪರಿಭ್ರಮಣೆಗಳಿಗೂ, ಸೌರವ್ಯೂಹದಲ್ಲಿಯ ಸೂರ್ಯ–ಗ್ರಹ ಸಂಬಂಧಕ್ಕೂ ದೇವಾಲಯದಲ್ಲಿಯ ವಿಗ್ರಹ–ಭಕ್ತ ಸಂಬಂಧಕ್ಕೂ ಧೂಮಕೇತು ದರ್ಶನಕ್ಕೂ ಗಣ್ಯವ್ಯಕ್ತಿಗಳ ಮರಣಕ್ಕೂ ಇತ್ಯಾದಿ ತಳಕುಹಾಕುವ 'ಸೃಜನಶೀಲ ಮನಸ್ಸಿ'ನ ನೆಲೆ ಪಾಮರ ಮುಂದಿಯ ವ್ಯಾವಹಾರಿಕ ಅಥವಾ ವೈಜ್ಞಾನಿಕ ಪ್ರಪಂಚವಲ್ಲ, ಅದು ಮನೋಚಿಕಿತ್ಸಾಲಯ!

"A physicist reading these books [Capra and Zukav] might feel like someone on a familiar street who finds that all the old houses have suddenly turned mauve." Jeremy Bernstein *New Yorker* ಪತ್ರಿಕೆಯಲ್ಲಿ ಪ್ರಕಟಿಸಿದ ವಿಮರ್ಶೆ (೮-೧೦-೧೯೭೯)ಈ ಎಲ್ಲ ವಕ್ರಲೇಖನ, ವಿಕೃತ ಭಾವನೆ ಮತ್ತು ವಿಚಿತ್ರ ಚಿಂತನೆಗಳ ಬಗೆಗಿನ ಸಮರ್ಥ ಮತ್ತು ಸಂಕ್ಷಿಪ್ತ ತೀರ್ಪು.

(ಸಾರಾಂಶ : ಕಪ್ರಾ ಮತ್ತು ಝುಕಾವ್ ಅವರ ಈ ಪುಸ್ತಕಗಳನ್ನು ಓದುವ ಭೌತವಿಜ್ಞಾನಿಯ ಮನಸದಲ್ಲಿ ಏನು ಭಾವನೆ ಸ್ಫುರಿಸೀತು! ನೀವೊಂದು ಪರಿಚಿತ ರಸ್ತೆಯಲ್ಲಿ ನಡೆದು ಹೋಗುತ್ತಿರುವಿರೆಂದು ಭಾವಿಸೋಣ. ಆಗ ಹಠಾತ್ತನೆ ಆ ರಸ್ತೆಯಲ್ಲಿಯ ಹಳೆಮನೆಗಳೆಲ್ಲವೂ ಉಜ್ಜ್ವಲ ಧೂಮ್ರವರ್ಣ ತಳೆದುವಾದರೆ ನಿಮ್ಮ ಪ್ರತಿಕ್ರಿಯೆ ಏನು ? ಅಂಥ ಭಾವನೆ ಆ ಭೌತ ವಿಜ್ಞಾನಿಯ ಮನದಲ್ಲಿ ಉದ್ಭವಿಸೀತು.)

* ಐನ್‌ಸ್ಟೈನ್ ಇಂಗ್ಲೆಂಡಿನಲ್ಲಿದ್ದಾಗ (೧೯೨೧) ನಡೆದ ಒಂದು ಘಟನೆ. ಇವರು ಸಾಪೇಕ್ಷತಾ ಸಿದ್ಧಾಂತವನ್ನು (theory of relativity) ಪ್ರತಿಪಾದಿಸಿ (೧೯೦೫ ಮತ್ತು ೧೯೧೫) ಅನೇಕ ಗಹನ ವೈಜ್ಞಾನಿಕ ಸಮಸ್ಯೆಗಳಿಗೆ

ಪರಿಹಾರ ನೀಡಿದ್ದರು. ಆಗ ಪ್ರಾಜ್ಞ ಚಿಂತನಶೀಲರನ್ನು ಬಾಧಿಸಿದ ತೀವ್ರ ಸಮಸ್ಯೆ 'ಸಾಪೇಕ್ಷತಾ ಸಿದ್ಧಾಂತ ಮತ್ತು ನಾಸ್ತಿಕತೆ.' ಈ ಸಿದ್ಧಾಂತ ಭಗವದ-ಸ್ತಿತ್ವವನ್ನು ನಿರಾಕರಿಸುವುದರ ಮೂಲಕ ನಾಸ್ತಿಕತೆಗೆ ತಾತ್ತ್ವಿಕ ಬುನಾದಿ ಒದಗಿಸಿದೆ ಎಂಬ ಅಭಿಪ್ರಾಯ ಹಲವಾರು ಆಸ್ತಿಕರಲ್ಲಿ ಪ್ರಚಲಿತವಾಗಿತ್ತು. ಅರಿಯಲಾಗದ್ದನ್ನು ಮತ್ತು ಅರಿಯಬಾರದ್ದನ್ನು ಅರಿಯಲು ಮಾಡುವ ಒಂದೊಂದು ಎತ್ತುಗಡೆಯೂ (ಪ್ರಯತ್ನ) ನಾಸ್ತಿಕತೆಯಿಂದ ಹೊಮ್ಮುತ್ತದೆ. ಸಾಪೇಕ್ಷತಾ ಸಿದ್ಧಾಂತ ಇಂಥ ಒಂದು ಎತ್ತುಗಡೆಯಾದ್ದರಿಂದ ಅದರ ನೆಲೆ ನಾಸ್ತಿಕತೆ ಎಂಬುದಾಗಿ ಒಂದು ಪಂಗಡ 'ಪ್ರಾಮಾಣಿಕ'ವಾಗಿ ಭಾವಿಸಿತ್ತು; ವಿಶ್ವ ನಿಯಮಗಳನ್ನು ಆವಿಷ್ಕರಿಸಿ ಭಗವಂತನ ಮೂಲವನ್ನೇ ಬಯಲು ಗೊಳಿಸುವ ಪ್ರತಿಯೊಂದು ಕ್ರಿಯೆಯೂ ನಾಸ್ತಿಕತೆ ಬೆಳೆಯಲು ಪ್ರೇರಕವಾಗು ತ್ತದೆ, ಸಾಪೇಕ್ಷತಾ ಸಿದ್ಧಾಂತ ಇಂಥ ಪ್ರಯತ್ನವಾದ್ದರಿಂದ ಅದು ನಾಸ್ತಿಕತೆ ಯನ್ನು ಪೋಷಿಸುವ ಸೆಲೆ ಎಂಬುದಾಗಿ ಇನ್ನೊಂದು ಪಂಗಡ ಅಷ್ಟೇ 'ಪ್ರಾಮಾಣಿಕ'ವಾಗಿ ಅಂಗೀಕರಿಸಿತ್ತು. ಈ ಉಭಯ ಪ್ರಾಮಾಣಿಕತಾತಿರೇಕಗಳ ಮೂಲ ನಿಜಕ್ಕೂ ಗಾಢ ಅಜ್ಞಾನ, ಇದನ್ನೇ ನಿಜಜ್ಞಾನವೆಂದು ಭ್ರಮಿಸುವ ಬುದ್ಧ್ಯಂಧತೆ ಮತ್ತು ಹಾಗೆಂದು ಸಾರಿ ಬಲಾತ್ಕರಿಸುವ ನಿರಂಕುಶತೆ. ಕೊಪರ್ನಿಕಸ್-ಗೆಲಿಲಿಯೋ-ಬ್ರೂನೋ ಪ್ರಕರಣಗಳು ಐತಿಹಾಸಿಕ ನಿದರ್ಶನ ಗಳು; ನಮ್ಮ ದೇಶದೊಳಗಿನ ವಿಜ್ಞಾನ-ಮತಧರ್ಮ ನಿರಂತರ ಕದನಗಳು ಅತಿ ವೇದನೆಯ ಸದ್ಯದ ಘಟನೆಗಳು. ಈ ಮತಿವಿಕಲ್ಪ ಈ ಮತಭ್ರಾಂತಿ ಈ ದುಷ್ಟ ಹಠ ಎಂದು ನಿರ್ನಾಮವಾಗಬಹುದು ?

ಕ್ಯಾಂಟರ್ಬರಿಯ ಆರ್ಚ್‌ಬಿಷಪ್ ಬ್ರಿಟಿಷ್ ಆಸ್ತಿಕ ಪ್ರಜ್ಞೆಯ ಮೂರ್ತ ರೂಪ ಮತ್ತು ಹಿತರಕ್ಷಕ. ಯೋಗ್ಯ ಗೃಹಸ್ಥ. ಸಭ್ಯ. ಸುಸಂಸ್ಕೃತ. ಸಾಪೇಕ್ಷತಾ ಸಿದ್ಧಾಂತದ ಛಾಪು ಪ್ರಭಾವ ಏನು. ಇವುಗಳಿಂದ ಮತಧರ್ಮಗಳ ಮೇಲೆ ಏನು (ದುಷ್-)ಪರಿಣಾಮವಿದೆ ಭಗವದಸ್ತಿತ್ವದ ಬಗ್ಗೆ ಈ ಸಿದ್ಧಾಂತ ಏನು ಪ್ರತಿಪಾದಿಸುತ್ತದೆ ಎಂಬ ವಿವರಗಳನ್ನು ಕರಾರುವಾಕ್ಕಾಗಿ ಅರಿಯಬೇಕೆಂದು ಬಯಸಿ ಇವರು ಪ್ರಯತ್ನಶೀಲರಾದರು. ಸಾಪೇಕ್ಷತಾ ಸಿದ್ಧಾಂತ ಕುರಿತ ಪುಸ್ತಕ ಲೇಖನ ಮೊದಲಾದ ಪ್ರಕಟಣೆಗಳನ್ನು ಸಂಗ್ರಹಿಸಿದರು, ಅಭ್ಯಸಿಸಿದರು. ಆದರೆ ವಿಜ್ಞಾನದ ಹಿನ್ನೆಲೆ ಇರದಿದ್ದ ಇವರಿಗೆ ಈ ಸಿದ್ಧಾಂತದ ತಲೆ ಬುಡ ಹತ್ತಲಿಲ್ಲ. ಕಂಪಕ್ಕೆ ಕಾಲಿಟ್ಟ ಕೋಣದಂತಾಯಿತು ಇವರ ಸ್ಥಿತಿ—

ಅಧಿಕ ಪ್ರಯತ್ನ ಇವರನ್ನು ಅಧಿಕ ಪಂಕದಲ್ಲಿ ಹುಗಿಸುತ್ತಿತ್ತೇ ಹೊರತು ಅದರಿಂದ ಪಾರಾಗುವ ಹಾದಿ ತೋರಿಸುತ್ತಿರಲಿಲ್ಲ. ಎಂದೇ ಆರ್ಚ್‌ಬಿಷಪ್ ಮಹಾಶಯರು ಒಂದು ತೆರನಾದ ಧಾರ್ಮಿಕ-ಬೌದ್ಧಿಕ-ತಾರ್ಕಿಕ ಉದ್ವಿಗ್ನತೆಯಿಂದ ಕಂಪಿಸುತ್ತಿದ್ದರು.

ಸಮಸ್ಯಾಪರಿಹಾರಕ್ಕೆ ಕಾಲ ಪಕ್ವವಾಯಿತು : ಭೋಜನಸಮಾರಂಭ. ಐನ್‌ಸ್ಟೈನ್('ಸೈತಾನದೂತ' ಅಥವಾ ಅವಧೂತ !) ಮತ್ತು ಆರ್ಚ್‌ಬಿಷಪ್ (ಭಗವಂತನ ರಕ್ಷಕ) ಅಲ್ಲಿ ನೆರೆದಿದ್ದ ಹಲವಾರು ಗಣ್ಯರ ಪೈಕಿ ಇಬ್ಬರು. ಸ್ನೇಹ ಸೌಹಾರ್ದ ವಿನಯಮಿಶ್ರಿತ ಪರಿಸರದಲ್ಲಿ ಆತ್ಮೀಯ ಮಾತುಕತೆ ಮುಂದುವರಿದು ಯುಕ್ತ ಮುಹೂರ್ತ ಒದಗಿಬಂದಿತು. ಆರ್ಚ್‌ಬಿಷಪ್ ತುಂಬ ಎಚ್ಚರಿಕೆಯಿಂದ ತಮ್ಮ ಸಂದೇಹ ಪ್ರಕಟಿಸಿದರು : "ಐನ್‌ಸ್ಟೈನ್ ಪ್ರಭೃತಿಗಳೇ ! ಸಾಪೇಕ್ಷತಾ ಸಿದ್ಧಾಂತದಿಂದ ನಮ್ಮ ಮತಧರ್ಮಗಳ ಮೇಲೆ ತೀವ್ರ ಪರಿಣಾಮವಾಗಿದೆಯೆಂದು ಕೇಳಿದ್ದೇನೆ. ನಿಜ ಸಂಗತಿ ಏನು ? ಮಾನವನ ನೈತಿಕ ಹಾಗೂ ಆಸ್ತಿಕ ಪ್ರಜ್ಞೆಯ ಮೇಲೆ ಇದರ ಪ್ರಭಾವವೇನೆಂದು ವಿವರಿಸುವಿರಾ ?"

"ಏನೂ ಪರಿಣಾಮವಿಲ್ಲ. ಅವರಿವರ ಮಾತು ನಂಬಬೇಡಿ. ಸಾಪೇಕ್ಷತಾ ಸಿದ್ಧಾಂತ ಶುದ್ಧ ಅಮೂರ್ತ ವಿಜ್ಞಾನ." ಕಡ್ಡಿ ಮುರಿದಂತೆ ನೇರ ನುಡಿ.

ಆರ್ಚ್‌ಬಿಷಪ್ ತಳೆದ ಆಸಕ್ತಿ ಸಹಜವಾದದ್ದೆಂದು ಐನ್‌ಸ್ಟೈನರಿಗೆ ಮನವರಿಕೆ ಆಗಿತ್ತು. ತತ್ತ್ವಶಾಸ್ತ್ರವಿದರು ಶುದ್ಧ ಭೌತವಿಜ್ಞಾನದ ಪರಿಕಲ್ಪನೆಗಳಾದ ಆಕಾಶ (space), ಕಾಲ (time) ಸಾಪೇಕ್ಷತೆ (relativity), ನಿರ್ದೇಶಕ ಚೌಕಟ್ಟು (frame of reference) ಮುಂತಾದವುಗಳ ಜೊತೆ ಮಕ್ಕಳು ಆಟಿಗೆಗಳೊಂದಿಗೆ ಆಡುವಂತೆ ವ್ಯವಹರಿಸುವುದರಿಂದ ಇಂಥ ಭಾವನಾತ್ಮಕ ಗೊಂದಲ ತಲೆದೋರುವುದೆಂದು ಐನ್‌ಸ್ಟೈನ್ ಭಾವಿಸಿದ್ದರು.

* ಅವರು ಹಿರಿಯ ಸಂಸ್ಕೃತ ಮತ್ತು ತತ್ತ್ವಶಾಸ್ತ್ರ ಪ್ರಾಧ್ಯಾಪಕರು. ತೂಕ ವ್ಯಕ್ತಿತ್ವ, ಸಮುಚಿತ ವಿನಯ. ಹಲವಾರು ಸಮಾನಾಸಕ್ತಿಗಳ ಕಾರಣವಾಗಿ (ವಿಜ್ಞಾನ ಅಥವಾ ತತ್ತ್ವಶಾಸ್ತ್ರ ಈ ಪೈಕಿ ಸೇರಿಲ್ಲ) ಅವರ ಮತ್ತು ನನ್ನ ನಡುವೆ ವಿಶ್ವಾಸ ಕುದುರಿತ್ತು. ಒಂದು ದಿನ ಅವರೆಂದರು "ಐನ್‌ಸ್ಟೈನ್ ಅವರಿಗಿಂತ ಹೈಸನ್‌ಬರ್ಗ್ ಅವರನ್ನು ಹೆಚ್ಚು ಗೌರವಿಸುತ್ತೇನೆ." (ಐನ್‌ಸ್ಟೈನ್ ಮತ್ತು ಬೋರ್ ಸಮಭುಜರು, ಅನುಕ್ರಮವಾಗಿ ೧೮೭೯-೧೯೫೫ ಮತ್ತು ೧೮೮೫-

೧೯೬೨ ಬಾಳಿದವರು. ಹೈಸನ್‌ಬರ್ಗ್, ೧೯೦೧-೭೬, ಮುಂದಿನ ಪೀಳಿಗೆಯು ವರು, ಬೋರ್‌ಅವರ ಶಿಷ್ಯ ಕೂಡ) ಪರಮಾಣುಪ್ರಪಂಚದ ಈ ಮಹಾ ಸೀಮಾಪುರುಷರ ಯೋಗ್ಯತೆ ಅಳೆಯಲು ಆ ಮಟ್ಟದವರೇ ಬರಬೇಕು— ನನ್ನಿಂದ ಅಸಾಧ್ಯ, ನಮ್ಮ ಪ್ರಾಧ್ಯಾಪಕ ಮಿತ್ರರಿಂದಂತೂ ಊಹಾತೀತ !

ತುಸು ವಿಸ್ಮಿತನಾಗಿ "ಕಾರಣವೇನು ?" ಎಂದು ಕೇಳಿದೆ.

ಅವರೆಂದರು "ಐನ್‌ಸ್ಟೈನ್ ಪ್ರತಿಪಾದಿಸಿದ್ದು ಕೇವಲ ನಮ್ಮ ಅದ್ವೈತ ಸಿದ್ಧಾಂತ, $E = mc^2$, ಶಕ್ತಿ-ರಾಶಿ ಸಮತೆ ಎಂಬ ತತ್ತ್ವವನ್ನು. ಇದು ಹೊಸ ತಲ್ಲ. ಹೈಸನ್‌ಬರ್ಗ್ ಆದರೋ ಅನಿಶ್ಚಿತತಾತತ್ತ್ವವನ್ನು (uncertainty principle)ಪ್ರತಿಪಾದಿಸಿ—ಅಂದರೆ ನಮ್ಮ ಸರ್ಪರಜ್ಜು ನ್ಯಾಯವನ್ನು ವಿಸ್ತರಿಸಿ—ಪೌರಸ್ತ್ಯ ಮತ್ತು ಪಾಶ್ಚಾತ್ಯ ತತ್ತ್ವಶಾಸ್ತ್ರಗಳನ್ನು ಬೆಸೆದಿದ್ದಾರೆ. ಎಂದೇ ಹೈಸನ್‌ಬರ್ಗ್‌ಅವರಿಗೆ ನನ್ನದು ಅಧಿಕ ನಮನ !"

ನಿಜ ! ತಿಳಿದಿದೆ ಎಂದು ತಿಳಿದಾತ ತಿಳಿದಾತನಲ್ಲ, ತಿಳಿದಿಲ್ಲವೆಂದು ತಿಳಿದಾತ ತಿಳಿದಾತ ! ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ— ಇರ ಬೇಕಾಗಿಯೂ ಇಲ್ಲ !

* ಸಾಹಿತ್ಯ ಮಿತ್ರರೊಬ್ಬರು ಜನಪ್ರಿಯ ವಿಜ್ಞಾನ ವಾಙ್ಮಯ ಓದಿ ಶ್ರೀಶಂಕರಾಚಾರ್ಯರ ಅದ್ವೈತವಾದಕ್ಕೂ ಐನ್‌ಸ್ಟೈನರ ಸಾಪೇಕ್ಷತಾ ಸಿದ್ಧಾಂತಕ್ಕೂ ತಳಕುಹಾಕಿದರು. ಬಳಿಕ ತಮ್ಮ ಈ ಮುದ್ದು ಕೂಸನ್ನೇ ಒಂದು ಸಂಶೋಧನ ವಿಷಯವಾಗಿ ಆಯ್ದು ಖ್ಯಾತ ಸಾಪೇಕ್ಷತಾ ಸಿದ್ಧಾಂತಿಯೊಬ್ಬರನ್ನು ತಮಗೆ ಸಂಶೋಧನ ಮಾರ್ಗದರ್ಶಿ ಆಗಬೇಕೆಂದು ಕೋರಿದರು. ಆ ವಿಜ್ಞಾನಿ-ವಿದ್ವಾಂಸರು ಶಂಕರ ಸಿದ್ಧಾಂತವನ್ನು ಇದರ ಬೌದ್ಧಿಕ ಸೌಂದರ್ಯಕ್ಕಾಗಿಯೂ ಆಂತರಿಕ ತ್ರಾಣಕ್ಕಾಗಿಯೂ ಓದಿ ಮೆಚ್ಚಿ ಗೌರವಿಸಿದವರು. ಅವರು ನೇರವಾಗಿ ತಮ್ಮ ಈ ವಿನೂತನ ಯುವ ಸಂಶೋಧಕನಿಗೆ ಉಪದೇಶಿಸಿದರು: "ಒಂದು ಕೇವಲ ಬೌದ್ಧಿಕ ವಿಹಾರ— ಕಾವ್ಯದಂತೆ; ಇನ್ನೊಂದು ಶುದ್ಧ ವೈಜ್ಞಾನಿಕ ಸಂಶೋಧನೆ—ವಾಸ್ತವತೆ.ಇವನ್ನು ಬೇರೆ ಬೇರೆಯಾಗಿ ಬೆಳೆಯಲು ಮತ್ತು ಇರಲು ಬಿಡುವುದು ಇವುಗಳಿಗೂ ನಿಮಗೂ, ಒಟ್ಟಾರೆ, ಸಮಗ್ರ ಜ್ಞಾನ ಪ್ರಪಂಚಕ್ಕೂ ಕ್ಷೇಮ. ಇವನ್ನು ಬೆಸೆಯುವ ದುಸ್ಸಾಹಸ ನಿಮಗೆ ಮಾತ್ರವಲ್ಲ ಯಾರಿಗೂ ಖಾತ್ರಿ ಬೇಡ."

ಛಲ ಬಿಡದ ಈ ಯುವ ಸಂಶೋಧಕ, ಹಿರಿಯ ತತ್ತ್ವಶಾಸ್ತ್ರ ಪಂಡಿತ

ರೊಬ್ಬರನ್ನು ಮಾರ್ಗದರ್ಶಿಯಾಗಿ ಆಯ್ದು, ತಮ್ಮ ಮಹಾನಿಬಂಧವನ್ನು ಅಪಾರ ಪರಿಶ್ರಮ, ಶ್ರದ್ಧೆ ಮತ್ತು ಪ್ರಾಮಾಣಿಕತೆ ಸಹಿತ ಸಿದ್ಧಪಡಿಸಿದ್ದಾರೆ. ಇವರಿಗೆ ಡಾಕ್ಟೊರೇಟ್ ಬರುವುದು ಖರೆ.

ಆದರೆ ಎಷ್ಟು ಟನ್ ಇಂಥ ಮಹಾನಿಬಂಧಗಳು ಎಷ್ಟೇ ಘೋರವಾಗಿ ಅದ್ವೈತ-ಸಾಪೇಕ್ಷತೆ ಏಕತ್ವವನ್ನು ಗರ್ಜಿಸಿದರೂ ಎಷ್ಟು ಮಂದಿ ಪಿಎಚ್‌ಡಿಗಳು ಇದನ್ನು ಸಾಧುವೆಂದು ಅಂಗೀಕರಿಸಿದರೂ ಎಷ್ಟು ವಿಶ್ವವಿದ್ಯಾಲಯಗಳಲ್ಲಿ ಈ ಬಗ್ಗೆ ಪೀಠಗಳು ಸ್ಥಾಪನೆಯಾಗಿ ಸಂಶೋಧನೆ ಮುಂದುವರಿದರೂ ಐನ್‌ಸ್ಟೈನ್ ನುಡಿದ ಭರತವಾಕ್ಯಕ್ಕೆ ಪ್ರತಿ ಇಲ್ಲ : ತತ್ತ್ವಶಾಸ್ತ್ರ ಶುದ್ಧ ಊಹೆ, ಸಾಪೇಕ್ಷತೆ ಶುದ್ಧ ವಿಜ್ಞಾನ—ಒಂದು ಇನ್ನೊಂದನ್ನು ಪ್ರಭಾವಿಸಬಹುದು, ಬೆಂಬಲಿಸಬಹುದು, ಪೋಷಿಸಲೂಬಹುದು ; ಆದರೆ ಇದು ಅದಲ್ಲ, ಅದು ಇದಲ್ಲ. ಬಹುಮತವಲ್ಲ ಖಚಿತತ್ವನಿರ್ಣಾಯಕ.

ವಿಜ್ಞಾನವನ್ನು ಇದರ ತಾಂತ್ರಿಕ ವಿವರಗಳಲ್ಲಿ ಆಳವಾಗಿ ಅಭ್ಯಸಿಸದೆ. ಕೇವಲ ಜನಪ್ರಿಯ ವಿಜ್ಞಾನ ವಾಙ್ಮಯ ವಾಚನದಿಂದ ವಿಜ್ಞಾನದ ಹಲವಾರು ಪರಿಕಲ್ಪನೆ, ಸೂತ್ರ, ಸಾಧನೆ, ಸಿದ್ಧಿಗಳಿಗೆ ಪ್ರವೇಶಗಳಿಸುವ ತೀಕ್ಷ್ಣ ಮತಿಗಳು ತಮ್ಮ ಮಾನಸಸಂಜಾತ ಸುಂದರ ಶಿಶುಗಳ ಪ್ರತಿಬಿಂಬಗಳನ್ನೇ ವಿಜ್ಞಾನದಲ್ಲಿ ಒಮ್ಮೊಮ್ಮೆ ಕಾಣುವುದು ಅಸಹಜವಲ್ಲ, ಅಪ್ರಾಮಾಣಿಕವೂ ಅಲ್ಲ. ಇದೊಂದು ಮನೋವೈಜ್ಞಾನಿಕ ಮತ್ತು ನೈಸರ್ಗಿಕ ವಿದ್ಯಮಾನ. ಈ ಪ್ರತಿಬಿಂಬಗಳು ವಿಜ್ಞಾನೇತರ ಚಿಂತನಪ್ರಕಾರಗಳಲ್ಲಿ ರೂಪಕಗಳಾಗಿಯೋ ಉಪಮೆಗಳಾಗಿಯೋ ಮರುಹುಟ್ಟು ಪಡೆದು ಸಾಹಿತ್ಯದ ಸೃಜನಶೀಲತೆಗೆ ಮೆರುಗು ಪೂಸುವುದುಂಟು. ಇದೆಲ್ಲ ಸರಿ. ಆದರೆ ಈ ಪ್ರತಿಬಿಂಬವನ್ನೇ ನಿಜಬಿಂಬವೆಂದು ಸಾಧಿಸ ಹೊರಟಾಗ —ರಾಜೀವಗಾಂಧಿಯವರ ಹನನವಾದಾಗ 'ನವಗ್ರಹ'ಗಳ ವಿನ್ಯಾಸವನ್ನು ಪರೀಕ್ಷಿಸಿ ಆ ವಿಚಿತ್ರ ವಿನ್ಯಾಸದ ಪರಿಣಾಮವೇ ಈ ಹನನ ಎಂದು ಪ್ರಚಾರ ಮಾಡಲಾರಂಭಿಸಿದಾಗ—ವಿವೇಕಿಗಳು, ಪ್ರಾಜ್ಞರು ವಿಚಾರಶೀಲರು ಮೊದಲಾದವರು ಎಚ್ಚರಗೊಂಡು ಮುಸುಕಿನೊಳಗಿನ ಈ ಗುಮ್ಮವನ್ನು ನಿರ್ನಾಮಗೊಳಿಸಲೇಬೇಕು. ಫಲಜ್ಯೋತಿಷ್ಯ ಮತ್ತು ಇದರ ಜ್ಞಾತಿಗಳಾದ ಹಸ್ತಸಾಮುದ್ರಿಕಾ ಶಾಸ್ತ್ರ, ನಾಡೀಗ್ರಂಥ, ಅಂಜನ, ಮಾಟ ಮುಂತಾದವು ಈ ತೆರನಾದ ಸಾಮಾಜಿಕ ಪಿಡುಗುಗಳು. ಇವುಗಳ ಮೂಲೋತ್ಪಾಟನೆ ಆದ ಹೊರತು ಸಮಾಜದ ಮನಸ್ಸು ಸ್ವಾಸ್ಥ್ಯ ಗಳಿಸದು.

೭

* ಡಾ ಎಸ್. ಬಾಲಚಂದ್ರರಾಯರು, ಪ್ರೊ ಕೆ. ರಾಮಕೃಷ್ಣ ಉಡುಪರು ಮತ್ತು ಶ್ರೀ ಯುಮರ್ಗಂಜ ಭೀಮ ಜೋಯಿಸರು ನನ್ನ ಹಲವಾರು ಮೂಲಭೂತ ಸಂದೇಹಗಳಿಗೆ ಸಮರ್ಪಕ ವಿವರಣೆ ನೀಡಿ ಉಪಕರಿಸಿದ್ದಾರೆ. ಆದರೆ ತೀರ್ಮಾನಗಳೆಲ್ಲವೂ ನನ್ನವೇ— ಇವುಗಳ ಸರಿ ತಪ್ಪುಗಳಿಗೆ ನಾನು ಮಾತ್ರ ಬದ್ಧ.

* ನಾಟ್ಯಾಚಾರ್ಯ ಕೆ. ಮುರಲೀಧರರಾಯರು ಚಿತ್ರಗಳನ್ನು ಸ್ಫುಟವಾಗಿ ಬಿಡಿಸಿಕೊಟ್ಟು ಸಹಕರಿಸಿದ್ದಾರೆ.

* ಪುಟ iii ಮತ್ತು iv ರಲ್ಲಿ ಉಲ್ಲೇಖಿಸಿರುವ ಕಂದ ಪದ್ಯಗಳ ಆಕರ : ಡಾ ಟಿ. ವಿ, ವೆಂಕಟಾಚಲ ಶಾಸ್ತ್ರಿಯವರು ಸಂಪಾದಿಸಿರುವ 'ಕನ್ನಡ ಚೆನ್ನುಡಿ.'

* ಹರ್ಷ ಪ್ರಿಂಟರ್ಸ್‌ನ ಕಾರ್ಮಿಕ ಬಂಧುಗಳು ನನ್ನ ಸಹನೆ ಪೀಡೆಗಳನ್ನು ಎಂದಿನ ವಿಶ್ವಾಸದಿಂದ ಸಹಿಸಿ ಪುಸ್ತಕವನ್ನು ಸಾಧ್ಯವಾಗುವಷ್ಟು ಪರಿಷ್ಕಾರವಾಗಿ ಮುದ್ರಿಸಿಕೊಟ್ಟಿದ್ದಾರೆ.

ಈ ಎಲ್ಲ ಕ್ರಿಯಾಶೀಲ ಚೇತನಗಳಿಗೆ ಹಾರ್ದಿಕ ನಮನಗಳು.

ಟೀಕೆ, ಟಿಪ್ಪಣಿ, ಖಂಡನೆ, ತಿರಸ್ಕಾರ ಮುಂತಾದವುಗಳಿಗೆ ಗೌರವಪೂರ್ವಕ ಸ್ವಾಗತ ಉಂಟು.

ಜಿ. ಟಿ. ನಾರಾಯಣರಾವ್

೮ ಅತ್ರಿ ಕಾಮಾಕ್ಷಿ ಆಸ್ಪತ್ರೆ ರಸ್ತೆ
ಕುವೆಂಪುನಗರ
ಮೈಸೂರು ೫೭೦ ೦೨೩

ದೂರವಾಣಿ ೨೫೭೯

೬-೧೦-೧೯೮೨

# ಹೂರಣ

ಅನುಬಂಧಗಳು



## ತಿದ್ದುಪಡಿ

ಪುಟ ೫೦ರಲ್ಲಿ ಕೆಳಸಾಲು "ಚಿತ್ರ ೪ರ [ಪುಟ ೪೮ ಮತ್ತು ೪೯] ಎರಡು ಗ್ರಹ ಕುಂಡಲಿಗಳಲ್ಲಿಯ 'ನವಗ್ರಹ' ವಿತರಣೆಗಳನ್ನು ಹೋಲಿಸಿ" ಎಂದಾಗಬೇಕು.

ಪುಟ ೧೦೦ರಲ್ಲಿ ನಾಲ್ಕನೆಯ ಸಾಲು 'end' ಪದ 'and' ಎಂದಾಗಬೇಕು.

# ಭವಿಷ್ಯವಾಚನ

## ಮೂರು ಪ್ರಸಂಗಗಳು

* ರೈವತ ಮಹರ್ಷಿ ತನ್ನ ಸುಪುತ್ರಿ ರೇವತಿಗೆ ಅನುರೂಪ ವರ ಯಾರೆಂದು ತಿಳಿಯುವ ಸಲುವಾಗಿ ಆಕೆಯನ್ನು ಕರೆದುಕೊಂಡು ಸೃಷ್ಟಿಕರ್ತನಲ್ಲಿಗೆ ಹೋಗುತ್ತಾನೆ. ಭಕ್ತನ ಇಂಗಿತವರಿತ ಬ್ರಹ್ಮ ಆದೇಶಿಸುತ್ತಾನೆ "ಈಗ ಭೂಮಂಡಲದಲ್ಲಿರುವ ಅರ್ಹ ಯುವಕರ ಹೆಸರುಗಳನ್ನು ಹೇಳು, ನೋಡೋಣ."

ಅಂಥವರ ಒಂದು ಶ್ರೇಣಿಯನ್ನೇ ರೈವತ ನಿವೇದಿಸುತ್ತಾನೆ. ಬ್ರಹ್ಮ ನಸುನಕ್ಕು ಉದ್ಗರಿಸುತ್ತಾನೆ "ನೀನಲ್ಲಿಂದ ಹೊರಟಾಗ ಕೃತಯುಗ ನಡೆಯುತ್ತಿತ್ತು. ಆಗ ಅವರು ಬದುಕಿದ್ದರು ನಿಜ. ಆದರೆ ಈಗ ? ಹಲವಾರು ಸಹಸ್ರ ವರ್ಷಗಳೇ ಸಂದುಹೋಗಿವೆ. ಅವರೆಲ್ಲರೂ ಗತಿಸಿದ್ದಾರೆ. ಬ್ರಹ್ಮಲೋಕದಲ್ಲಿಯ ಒಂದೊಂದು ಕ್ಷಣವೂ ಭೂಲೋಕದಲ್ಲಿಯ ಹಲವು ಸಾವಿರ ವರ್ಷಗಳಿಗೆ ಸಮಾನ !"

"ಹಾಗಾದರೆ ಈಗ ನನಗೇನು ಮಾರ್ಗ, ಪ್ರಭು ?"

"ನೀನೀಗ ಧರೆಗೆ ಮಗಳ ಸಮೇತ ಹಿಂತಿರುಗು. ಅಲ್ಲಿಗೆ ತಲಪುವಾಗ ದ್ವಾಪರಯುಗ ನಡೆಯುತ್ತಿರುವುದು. ಬಲರಾಮ ಎಂಬ ತರುಣ ಧೀಮಂತನಿಗೆ ನಿನ್ನ ಮಗಳನ್ನು ಧಾರೆ ಎರೆದು ಕೃತಾರ್ಥನಾಗು."

** ಮರಮುದಿಯಾದರೂ ಹುಳಿ ಮುದಿಯೇ ? ಅರಸ ಯಯಾತಿ ದೈಹಿಕವಾಗಿ ವೃದ್ಧನಾಗಿದ್ದ. ಆದರೆ ವಿಷಯಲಾಲಸೆ ಹಿಂಗಿರಲಿಲ್ಲ. ತನ್ನ ವೃದ್ಧಾಪ್ಯವನ್ನು ಯಾರಾದರೂ ಯುವಕ ಸ್ವೀಕರಿಸಿ ಆತನ ಯೌವನವನ್ನು ತನಗೆ ದಾನವಿತ್ತುದಾಗಿದ್ದರೆ ಎಷ್ಟು ಚೆನ್ನ ಎಂದು ಆಶಿಸಿದ. ಆದರೆ ಈ ಅಸಹಜ ಹಾಗೂ ಅಸಮ ವಿನಿಮಯವನ್ನು ಒಪ್ಪುವ ಯುವಕ ಎಲ್ಲಿದ್ದಾನೆ ?

ಅರಸನ ಕೊನೆಯ ಮಗ ಪೂರು. ಈ ಯುವಕ ತನ್ನ ಮುಂದಿನ ತಂದೆಯ ಆಸೆ ಪೂರೈಸಲು ಒಪ್ಪಿದ. ವೃದ್ಧ ತರುಣನಾದ, ತರುಣ ವೃದ್ಧನಾದ. ನವಯುವಕ ಯಯಾತಿ ಸಂಸಾರದ ಐಹಿಕ ಸುಖ ಸಂತೋಷಗಳನ್ನು ದೀರ್ಘ ಕಾಲ ಅನುಭವಿಸಿದ.

*** ಬರಿಗಣ್ಣಿಗೆ ಗೋಚರವಾಗುವ ನಕ್ಷತ್ರಗಳನ್ನು ಉಜ್ಜ್ವಲತಾನುಸಾರ ಅಳವಡಿಸಿದರೆ ಮೊದಲನೆಯ ಮಣೆ ಸೂರ್ಯನಿಗೂ ಎರಡನೆಯದು ಲುಬ್ಧ

ಕಕ್ಕೊ ಸಲ್ಲುತ್ತವೆ. ಲುಬ್ಧಕದ ನೀಲ ವಜ್ರಕಾಂತಿ ಅತ್ಯಂತ ಮೋಹಕವಾಗಿದೆ. ಇದರ ದೂರ ನಮ್ಮಿಂದ ಸುಮಾರು ೯ ಜ್ಯೋತಿರ್ವರ್ಷಗಳು—ಸೆಕೆಂಡಿಗೆ ೩೦೦,೦೦೦ ಕಿಮೀ ಗಮಿಸುವ ಬೆಳಕಿನ ಕಿರಣ ಲುಬ್ಧಕದಿಂದ ನಮ್ಮಲ್ಲಿಗೆ ಬರಲು ೯ ವರ್ಷಗಳು ತೆಗೆದುಕೊಳ್ಳುವುದೆಂದು ಅರ್ಥ. ಆದ್ದರಿಂದ ಇಂದು ನಾವು ನೋಡುವ ಲುಬ್ಧಕ ೯ ವರ್ಷಗಳ ಹಿಂದಿನದು.

ಈಗ ನಾವೊಂದು ಕಾಲ್ಪನಿಕ ವಿಹಾರ ಹೋಗೋಣ: ಇಂದು ಮುಂಜಾನೆ ಎದ್ದು ಪೊಗದಸ್ತಾಗಿ ಉಪಾಹಾರ ಮೆದ್ದು ಖುದ್ದು ಬೆಳಕಿನ ನಾವೆಯನ್ನೇ ಏರಿ ಲುಬ್ಧಕಾಭಿಮುಖವಾಗಿ ಧಾವಿಸೋಣ. ನಮ್ಮ ನಾವೆಯ ವೇಗ ಬೆಳಕಿನದೇ. ನಾವು ಆ ನಕ್ಷತ್ರದ ಗೌರವಾನ್ವಿತ ಅತಿಥಿಗಳಾಗಿ ಇಳಿಯು ವಾಗ ಮಧ್ಯಾಹ್ನದ ಭೋಜನಕ್ಕೆ ಸಿದ್ಧರಾಗಿರುತ್ತೇವೆ. ಅನ್ಯ ನಕ್ಷತ್ರದ ಅನನ್ಯ ಆತಿಥ್ಯ. ಎಣೆ ಇಲ್ಲದ ಸಂಭ್ರಮ. ತುಸು ವಿಶ್ರಾಂತಿ. ಮತ್ತೆ ಅದೇ ನಾವೆ ಏರಿ ಭೂಮ್ಯಭಿಮುಖವಾಗಿ ಜಿಗಿಯುತ್ತೇವೆ. ನಮ್ಮ ದೇಹ ರಾತ್ರಿಯ ಊಟ ಬಯಸುವ ವೇಳೆಗೆ ಸುಂದರ ವಸುಂಧರೆಯ ಮಡಿಲು ತಲಪಿರುತ್ತೇವೆ. ಅಂದರೆ ಕೇವಲ ಒಂದು ಹಗಲಿನಲ್ಲಿ ನಮ್ಮ ಈ ಆಕಾಶಾಭಿಯಾನ ಮುಗಿದಂತಾಯಿತು. ಆದರೆ ಭೂಮಿಯಲ್ಲಿರುವ ನಮ್ಮ ಬಂಧು ಬಾಂಧವರ ಪ್ರಕಾರ ಅದೇ ಅವಧಿ ಯಲ್ಲಿ ೧೮ ವರ್ಷಗಳೇ ಸಂದು ಹೋಗಿರುತ್ತವೆ. ನಮ್ಮ ವಯಸ್ಸು, ಜೀವನ ದೃಷ್ಟಿ, ಉಲ್ಲಾಸ ಎಲ್ಲವೂ ಮುಂಜಾನೆಯಂತೆಯೇ ಇದ್ದರೂ ಅವರೆಲ್ಲರೂ ೧೮ ವರ್ಷ ವಯೋವೃದ್ಧತ್ವ ಗಳಿಸಿರುತ್ತಾರೆ! ನಮ್ಮತ್ತ ವಿಚಿತ್ರ ದೃಷ್ಟಿ ಬೀರುತ್ತಾರೆ.

ಸಹಸ್ರಯುಗ ಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ
ರಾತ್ರಿಂ ಯುಗ ಸಹಸ್ರಾಂತಾಂ ತೇಽಹೋ ರಾತ್ರವಿದೋ ಜನಾಃ
॥ಗೀತಾ ೮-೧೭॥

"ಸಾವಿರ ಯುಗಗಳವರೆಗೆ ಇರುವ ಬ್ರಹ್ಮನ ಹಗಲನ್ನೂ (ಮತ್ತು) ಸಾವಿರ ಯುಗಗಳ ವರೆಗೆ ಇರುವ (ಬ್ರಹ್ಮನ) ರಾತ್ರಿಯನ್ನೂ ಯಾರು ತಿಳಿದಿ ರುವರೋ ಅವರು ಅಹೋರಾತ್ರಿಗಳನ್ನು ಬಲ್ಲವರು." (ಅನುವಾದ : ಸ್ವಾಮಿ ಆದಿದೇವಾನಂದ)

ಈ ಉದಾಹರಣೆ-ಉಲ್ಲೇಖಗಳ ಮಥಿತಾರ್ಥವೇನು ?

* ಕಾಲದ ಅಸಿಧಾರೆ ವರ್ತನವನನ್ನು ಸತತವಾಗಿ ಏಕವೇಗದಿಂದ ಏಕದಿಶೆ

ಯಲ್ಲಿ ಕತ್ತರಿಸುತ್ತಿದೆ. ಇಲ್ಲಿ ಯಾರಿಗೂ ವಿನಾಯಿತಿ ಇಲ್ಲ. ಜನನ–ಬೆಳೆವಣಿಗೆ–ಬಾಲ್ಯ–ಕೌಮಾರ್ಯ–ವೃದ್ಧಾಪ್ಯ–ಮರಣ ಎಂಬ ದೃಶ್ಯಪರಂಪರೆ ಸತತವಾಗಿ ಅನಾವರಣವಾಗುತ್ತಲೇ ಇರುವುದು.

* ಕಾಲಪ್ರವಾಹದಿಂದ ವಿಮುಕ್ತನಾಗಿ ಹಿಂದಕ್ಕೆ (ಭೂತ) ಅಥವಾ ಮುಂದಕ್ಕೆ (ಭವಿಷ್ಯ) ಜಿಗಿಯುವುದು ಮಾನವನಿಗೆ ಅಸಾಧ್ಯ. ಈ ದೇಹಕ್ಕೆ ಇಷ್ಟೇ ಪ್ರಾಪ್ತಿ—ಭೂತದ ಬಗ್ಗೆ ಚಿಂತಿಸಿ ಫಲವಿಲ್ಲ. ಭವಿಷ್ಯದ ಬಗ್ಗೆ ಕಾತರಿಸಿ ಸುಖವಿಲ್ಲ, ವರ್ತಮಾನದಲ್ಲಿ ತೀವ್ರವಾಗಿ ಬಾಳುವುದೊಂದೇ ಶರಣು.

* ದೇಹಕ್ಕೆ ಸಾಧ್ಯವಾಗದ್ದನ್ನು ಕಾಲ್ಪನಿಕವಾಗಿ ಸಾಧ್ಯವಾಗಿಸುವುದು ಬಯಕೆಗಳನ್ನು ಈಡೇರಿಸುವ ಏಕೈಕ ಮಾರ್ಗ.

## ಕಾಲ ಎಂದರೇನು ?

ಈ ಸರಳ ಪ್ರಶ್ನೆಗೆ ನಿಮ್ಮ ದಿಢೀರ್ ಉತ್ತರ "ಗಡಿಯಾರ ತೋರಿಸುವುದೇ ಕಾಲ."

"ಹಾಗಾದರೆ ಪ್ರಪಂಚದ ಎಲ್ಲ ಗಡಿಯಾರಗಳನ್ನೂ ಕೈದು ಮಾಡೋಣ. ಆಗ ಕಾಲ ಏನಾದೀತು ?"

"ಸೂರ್ಯ ಮೂಡಿ ಮೇಲೇರಿ ನೆತ್ತಿಗೆರೆ ದಾಟಿ ಕೆಳಗಿಳಿದು ಕಂತುವುದಲ್ಲ ?"

ನಿಜ, ಅಂತಿಮವಾಗಿ ಎಲ್ಲ ಗಡಿಯಾರಗಳೂ ಮಾಡುವುದು ಸೂರ್ಯನ ಸರಿತದ ಅಳತೆಯನ್ನು. ಬೆಳಗಾಯಿತು ಎಂದರೆ ನೇಸರು ಮೂಡಿತೆಂದರ್ಥ. ಮತ್ತೆ ಅದು ಬಾನಿನಲ್ಲಿ ಎತ್ತರ ಎತ್ತರ ಸರಿದಂತೆ ನೀವು ದೈನಂದಿನ ಕಾರ್ಯಕಲಾಪಗಳಲ್ಲಿ ಮಗ್ನರಾಗುವಿರಿ. ಕತ್ತಲಾಯಿತು ಎಂದರೆ ನೇಸರು ಕಂತಿತೆಂದರ್ಥ. ಬಿರುಸು ದುಡಿಮೆಯ ಒಂದು ಹಗಲು ಅಲ್ಲಿಗೆ ಮುಗಿಯುತ್ತದೆ.

ಮುಂಜಾನೆ ಮುಂದುವರಿದು ನಡುಹಗಲಾಗಿ ಸಂಜೆ ಕವಿದು ಇರುಳು ತನ್ನ ಕರಿಮುಸುಕು ಹೊದೆಸಿ ಕರಗಿಹೋಗುವ ತನಕ ಪ್ರತಿದಿನವೂ ಹೆಚ್ಚು ಕಡಿಮೆ ಹಿಂದಿನ ದಿನದ ನಕಲೆಂದು ನಿಮಗೆ ತಿಳಿದಿದೆ. ಆದ್ದರಿಂದ ನಾಳೆಯೂ ಇದೇ ಕ್ರಮ ಪುನರಾವರ್ತಿಸುವುದೆಂದು ನೀವು ಊಹಿಸುವಿರಿ. ನಾಳಿನ ಅನುಭವ ಈ ಊಹೆಯನ್ನು ಸ್ಥಿರೀಕರಿಸುತ್ತದೆ.

ಇಂದು ನಿನ್ನೆಯಂತೆಯೇ ಇದೆ, ನಿಜ. ಆದರೆ ಪೂರ್ತಿ ಹಾಗಿಲ್ಲ. ನಿನ್ನೆ

ಈ ಹೊತ್ತಿಗೆ ಬಿಸಿಲು ರಣಗುಟ್ಟುತ್ತಿತ್ತು. ಇಂದು ಮೋಡ ಕವಿದಿದೆ. ನಿನ್ನೆ ನಿಮಗೆ ಶಾಲೆ ಇತ್ತು. ಇಂದು ರಜೆ. ನಿನ್ನೆ ಈ ಹೊತ್ತಿಗೆ ಇದ್ದ ಎಷ್ಟೋ ಜನ ಇಂದು ಸತ್ತು ಇಲ್ಲವಾಗಿದ್ದಾರೆ. ಆಗ ಇರದಿದ್ದ ಎಷ್ಟೋ ಶಿಶುಗಳು ಇಂದು ಹುಟ್ಟಿ ಕಣ್ತೆರೆದಿವೆ. ನಿಮ್ಮ ವಯಸ್ಸಾದರೂ ನಿನ್ನೆಗಿಂತ ಇಂದು ಹೆಚ್ಚಾಗಿದೆ. ಆದ್ದರಿಂದ ಕಾಲ ಎಂದರೆ ಬದಲಾವಣೆ. ಬದಲಾವಣೆ ಇಲ್ಲ ವಾಗಿದ್ದರೆ ಕಾಲಗಮನದ ಅರಿವು ನಮಗಾಗುತ್ತಿರಲಿಲ್ಲ.

ನಿತ್ಯಜೀವನದಲ್ಲಿ ನಾವು ಕಾಲವನ್ನು—ಅಂದರೆ ಕಾಲ ಸಂದು ಹೋದು ದನ್ನು—ಹೇಗೆ ಗ್ರಹಿಸುತ್ತೇವೆ ? ಅದನ್ನು ಅಳೆಯಲು ಅನುಸರಿಸುವ ವಿಧಾನ ವೇನು ?

ನಿರಂತರವಾಗಿ ಒಂದೇ ದರದಲ್ಲಿ ಮತ್ತು ಒಂದೇ ದಿಶೆಯಲ್ಲಿ ಹರಿಯು ತ್ತಿರುವ ಕಾಲ ಪ್ರವಾಹದಲ್ಲಿ ಕೆಲವು ಘಟನೆಗಳನ್ನು ಗುರುತಿಸುತ್ತೇವೆ : ಜನನ, ಶಾಲೆ ಸೇರಿದುದು, ಒಂದನೆಯ ತರಗತಿ ದಾಟಿದುದು, ಇತ್ಯಾದಿ ; ಇದೇ ರೀತಿ ಮಹಾವ್ಯಕ್ತಿಯೊಬ್ಬನ ಸಾಧನೆ, ದೇಶದ ಇತಿಹಾಸದಲ್ಲಿ ವಿಶೇಷ ಸಮಾರಂಭ ಇತ್ಯಾದಿ. ಬಳಿಕ, ಎರಡು ನಿರ್ದಿಷ್ಟ ಘಟನೆಗಳ ನಡುವೆ ಇಷ್ಟು ದಿವಸಗಳು ಸಂದುಹೋದುವು ಎನ್ನುತ್ತೇವೆ.

"ನನ್ನ ವಯಸ್ಸು ೪೬ ವರ್ಷ ೨ ತಿಂಗಳು ೨೩ ದಿವಸಗಳು" ಎನ್ನುವಾಗ ನಾನು ಹುಟ್ಟಿ ಇಂದಿಗೆ ಅಷ್ಟು ಕಾಲ ಸಂದಿದೆ ಎಂದರ್ಥ. ಇಲ್ಲಿ ನನ್ನ ಜನನ ಮೊದಲನೆಯ ಘಟನೆ, ಈಗಿನ ಅಸ್ತಿತ್ವ ಎರಡನೆಯದು.

ಆದ್ದರಿಂದ ಕಾಲ ಎಂದರೆ ಘಟನೆಗಳ ನಡುವಿನ ಅವಧಿ. ಚಂದ್ರ, ಸೂರ್ಯ, ಗ್ರಹ, ನಕ್ಷತ್ರಗಳು ಕಾಲಮಾಪನೆಗೆ ಒದಗಿರುವ ನೈಸರ್ಗಿಕ ಗಡಿ ಯಾರಗಳು. ಮಾನವಕೃತ ಗಡಿಯಾರಗಳು, ತಾರೀಕುಪಟ್ಟಿ ಮುಂತಾದವು ಕಾಲ ಅಳೆಯಲು ನಾವು ರೂಪಿಸಿರುವ ಸಹಾಯಕಗಳು.

## ಕಾಲ-ದೂರ ಸಂಬಂಧ

"ನಾನು ೨ ಗಂಟೆಗಳಲ್ಲಿ ೨೦ ಕಿಮೀ ಕ್ರಮಿಸಿದೆ."

"ಸೂರ್ಯ-ಭೂಮಿ ಅಂತರ ೧೪೯,೬೦೦,೦೦೦ ಕಿಮೀ. ಸೆಕೆಂಡಿಗೆ ೩೦೦,೦೦೦ ಕಿಮೀ ವೇಗದಿಂದ ಧಾವಿಸುವ ಬೆಳಕಿನ ಕಿರಣ ಈ ಅಂತರ ಕ್ರಮಿಸಲು ತೆಗೆದುಕೊಳ್ಳುವ ಕಾಲ ಎಷ್ಟು ?"

ಅಥವಾ, "ನನ್ನ ನಡಿಗೆಯ ವೇಗ ಗಂಟೆಗೆ ೫ ಕಿಮೀ. ಬಸ್‌ನಿಲ್ದಾಣ ನನ್ನ ಮನೆಯಿಂದ ೧೫ ಮಿನಿಟುಗಳ ನಡಿಗೆ ದೂರದಲ್ಲಿದೆ." ಈ ಮೂರು ನಿದರ್ಶನಗಳಲ್ಲಿ ನಾವು ತಿಳಿದೋ ತಿಳಿಯದೆಯೋ ಕಾಲ-ದೂರ-ವೇಗ ಅನ್ಯೋನ್ಯ ಸಂಬಂಧವನ್ನು—ಒಂದನ್ನುಳಿದು ಉಳಿದವು ಇಲ್ಲ—ಎಂಬರ್ಥದಲ್ಲಿ ಬಳಸಿಕೊಂಡಿದ್ದೇವೆ.

ಮೊದಲನೆಯ ನಿದರ್ಶನದಲ್ಲಿ ಕಾಲ ೨ ಗಂಟೆ, ದೂರ ೨೦ ಕಿಮೀ. ಆದ್ದರಿಂದ ವೇಗ ಗಂಟೆಗೆ ೧೦ ಕಿಮೀ.

ಎರಡನೆಯದರಲ್ಲಿ ದೂರ ೧೪೯,೬೦೦,೦೦೦ ಕಿಮೀ, ವೇಗ ಸೆಕೆಂಡಿಗೆ ೩೦೦,೦೦೦ ಕಿಮೀ. ಆದ್ದರಿಂದ ಕಾಲ ೪೯೯ ಸೆಕೆಂಡುಗಳು.

ಮೂರನೆಯದರಲ್ಲಿ ವೇಗ ಗಂಟೆಗೆ ೫ ಕಿಮೀ, ಕಾಲ ೧೫ ಮಿನಿಟುಗಳು. ಆದ್ದರಿಂದ ದೂರ ೧.೨೫ ಕಿಮೀ.

ಕಾಲ-ದೂರ-ವೇಗ ($t$–$s$–$v$) ಸಂಬಂಧ ಸೂತ್ರರೂಪದಲ್ಲಿ ಹೀಗಿದೆ :




ಕಾಲ $t$

$$t = s \div v$$

ಚಿತ್ರ ೧. ಭೌತತ್ರಿಭುಜ. ಇದರ ಭುಜಗಳು ಕಾಲ, ವೇಗ ಮತ್ತು ದೂರ ಎಂಬ ಭೌತ ಪರಿಮಾಣಗಳನ್ನು ಪ್ರತೀಕಿಸುತ್ತವೆ. ಇವುಗಳ ಅನ್ಯೋನ್ಯ ಸಂಬಂಧ ಗಮನಿಸಿ: ಒಂದಿರದಿದ್ದರೆ ಉಳಿದವೂ ಇರುವುದಿಲ್ಲ.

$$[ಕಾಲ] = [ದೂರ] \div [ವೇಗ]$$
$$t = s \div v$$
$$[ದೂರ] = [ವೇಗ] \times [ಕಾಲ]$$
$$s = v \times t$$
$$[ವೇಗ] = [ದೂರ] \div [ಕಾಲ]$$
$$v = s \div t$$

ಕಾಲ-ದೂರ-ವೇಗ ಸಂಬಂಧ ಹಾಗೂ ಪರಿಕಲ್ಪನೆ ತೀರ ಮೂಲಭೂತವಾದವು. ಇವು ನಾಗರಿಕತೆಯ ಅವಿಭಾಜ್ಯ ಅಂಗವಾಗಿ ನಮ್ಮ ಜೀವನವನ್ನೂ ವಿಜ್ಞಾನ ತಂತ್ರವಿದ್ಯೆಗಳನ್ನೂ ಪ್ರಭಾವಿಸುತ್ತ ಬಂದಿವೆ.

## ಭವಿಷ್ಯವಾಚನ ಎಂದರೇನು ?

ಮುಂದೆ ಸಂಭವಿಸಬಹುದಾದ್ದನ್ನು ಇಂದು ಕಣಿನುಡಿಯುವ ಪ್ರಯತ್ನವೇ ಭವಿಷ್ಯವಾಚನ. ನಾಳಿನ ಆಗುಹೋಗುಗಳ ಬಗೆಗೆ ನಮಗಿರುವ ಕುತೂಹಲ ಮಾನವೇತಿಹಾಸದಷ್ಟೇ ಪ್ರಾಚೀನವಾದದ್ದು. ಕಾರಣವೇನು ?

ನಿನ್ನೆಗಳು ಸಂದಿವೆ. ಅವನ್ನು ಹಿಂದೆ ಪಡೆಯುವಂತಿಲ್ಲ. ನಾಳೆಗಳು ಬರಲಿವೆ. ಅವನ್ನು ಎಳೆದು ತರುವಂತಿಲ್ಲ. ಈ ನಿನ್ನೆ–ನಾಳೆಗಳೆಂಬ ಪ್ರಪಾತಗಳ ನಡುವಿನ ಅತಿ ತೀಕ್ಷ್ಣ ಧಾರೆಯೇ ಇಂದು— ಈಗ. ಈ ಅಲಗಿನ ಮೇಲೆ ನಾನು ನಿಂತು ಉಭಯ ಪ್ರಪಾತಗಳನ್ನೂ ಅಸಹಾಯಕತೆಯಿಂದ ದಿಟ್ಟಿಸುತ್ತಿದ್ದೇನೆ. ಇನ್ನು ಈ ಅಲಗಾದರೂ ಹೇಗಿದೆ ? ಸಂತತ ಏಕದಿಶಾ ಏಕವೇಗ ಗಮನ.

ನಿನ್ನೆ ಹೋದರೆ ಹೋಗಲಿ. ಮಿಂಚಿದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ. ಇಂದು ಹೇಗೂ ಇಲ್ಲೇ ಇದೆ. ಇದರಲ್ಲೇನೂ ವಿಶೇಷ ಕಾಣುತ್ತಿಲ್ಲ. ನಾಳೆಯಾದರೋ ಪೂರ್ತಿ ಬೇರೆಯೇ. ಅದು ಮೈದೋರುವ ತನಕ ಅದರೊಳಗೆ ಏನು ಅಡಗಿದೆ ಎಂಬುದನ್ನು ಕಾಣಲಾರೆವು—ಕಾದಿರುವುದೊಂದೇ ಹಾದಿ: ರಾಮುಬರುವನೆಂದು !

ಈ 'ಕಾದಿರುವಿಕೆ'ಯನ್ನು ನಿವಾರಿಸಲಾರೆವು. ಹಾಗಿದ್ದರೂ ನಾಳೆ ಏನು ನಡೆದೀತೆಂಬುದನ್ನು ಇಂದೇ ಬಗೆಯಲು, ತಿಳಿಯಲು, ಕಾಣಲು ಅಥವಾ ಮುನ್ನುಡಿಯಲು ಸಾಧ್ಯವಾದರೆ ಎಷ್ಟು ಚೆನ್ನ !

ಎಲ್ಲಿಯೋ ಇರುವ ವಸ್ತುವನ್ನು ಇಲ್ಲಿಗೆ ತರುವುದು ಅಥವಾ ತರಿಸು ವುದು ಸಾಧ್ಯವಿದೆ. ಉದಾಹರಣೆಗೆ ಅಂಚೆ. ಅಂದರೆ ಸ್ಥಳ ಕುರಿತಂತೆ 'ದೂರ' ವನ್ನು ಇಲ್ಲವಾಗಿಸಬಹುದೆಂದಾಯಿತು. ಆದರೆ ಇದು ಸಾಕಷ್ಟು ಕಾಲಬೇಡು ತ್ತದೆ. ಅಂದರೆ ಏಕಕಾಲದಲ್ಲಿ ಒಂದು ವಸ್ತು ಉಭಯ ಸ್ಥಳಗಳಲ್ಲಿಯೂ ಇರಲಾರದು. ಹಾಗಾದರೆ ಮುಂದೆಂದೋ ನಡೆಯಲಿರುವ ಘಟನೆಯನ್ನು ಇಂದಿಗೆ ತರಿಸುವುದು ಇಲ್ಲವೇ ಆವಾಹಿಸುವುದು ಸಾಧ್ಯವಾಗದೇ ? ಅಂದರೆ ಘಟನೆ ಕುರಿತಂತೆ 'ಕಾಲ'ವನ್ನು ಇಲ್ಲವಾಗಿಸಲಾರೆವೇ ? ಅಸಾಧ್ಯ : ಒಂದೆಡೆ ಈಗ ನಡೆಯುವ ಘಟನೆ ಇನ್ನೊಂದೆಡೆ ಈಗಲೇ ಪ್ರಕಟವಾಗದು.

ನಮ್ಮ ಸಮಸ್ತ ಅನುಭವವೂ ಒಂದು ವಿಷಯವನ್ನು ಸ್ಪಷ್ಟಪಡಿಸುತ್ತದೆ. ಕಾಲವನ್ನು ನಿಲ್ಲಿಸಲಾರೆವು, ತ್ವರೆಗೊಳಿಸಲಾರೆವು, ನಿಧಾನಗೊಳಿಸಲೂ ಆರೆವು. ನಮ್ಮ ಬೇಕುಬೇಡಗಳನ್ನು ಲೆಕ್ಕಿಸದೆ ಅದು ಸರಿಯುತ್ತಿದೆ. ಅನಂತ ಸುರುಳಿ ಯೊಂದಿದೆಯೋ ಅದು ವರ್ತಮಾನ ಎಂಬ ಕಿಂಡಿ ಅಥವಾ ತೆರೆಮೂಲಕ ಸರಿಯುವಾಗ ಮಾತ್ರ ನಮಗೆ ದೃಶ್ಯ ಪ್ರದರ್ಶಿಸುವುದೋ ಎಂಬ ಭಾವನೆ ನಮ್ಮಲ್ಲಿ ಸ್ಫುರಿಸುತ್ತದೆ. ಈ ಸುರುಳಿ ಸರಿತದ ಮೇಲೆ ನಮ್ಮ ಪ್ರಭಾವ ಏನೂ ಇಲ್ಲ—ದೇವಮಾನವರದು ಕೂಡ !

ನಾಳೆಯನ್ನು ಇಂದು ಮುಂಗಾಣಬೇಕೇಕೆ ? ಇಂದನ್ನು ನೇರವಾಗಿ ಬಾಳಿದರೆ ನಾಳೆ ತಂತಾನೇ ಚೆನ್ನಾಗಿ ಅರಳದೇ ? ಇಂದು ಈಗ ಇಲ್ಲಿ—ಸರಿ;ನಾಳೆ ಆಗ ಅಲ್ಲಿ—ಕನಸು, ಕನಸಿನಿಂದ ನನಗೇನೂ ಆಗಬೇಕಾಗಿಲ್ಲ ಎಂಬ ಒಂದು ತೆರನಾದ ಹುಸಿಗತ್ತಿನಿಂದ ನಾಳೆ ಬಗೆಗಿನ ಯೋಚನೆಯನ್ನೇ ತಳ್ಳಿಹಾಕುವುದು ಸುಲಭ. ಆದರೆ ಇಂಥ ವರ್ತಮಾನ ವಾಗ್ವೀರರೂ ವಿಚಾರಶರಣರೂ ವಿಜ್ಞಾನ ಪುರುಷರೂ ಅವರ ಅರಿವಿಗೆ ಬರದೇ ಅಸಂಖ್ಯ ನಾಳೆಗಳಲ್ಲಿ ಮಾನಸಿಕವಾಗಿ ವಿಹರಿಸುತ್ತಿರುವುದು ಸೃಷ್ಟಿನಿಯಮ. ಕೆಲವು ನಿದರ್ಶನಗಳು :

* ಮದುವೆ ? ಅರಿಯಲಾಗದ ನಾಳೆಯತ್ತ ಇಂದು ಜೊತೆಯಾಗಿ ಜಿಗಿ ಯಲು ಗಂಡು-ಹೆಣ್ಣು ಮಾಡಿಕೊಂಡ ಒಪ್ಪಂದ. ಜಾತಕ,ಫಲಜ್ಯೋತಿಷಿಗಳಿಂದ ಭವಿಷ್ಯವಾಚನ, ಹಾಡು ಹರಕೆಗಳು ಮುಂತಾದವು ಇಲ್ಲಿ ವಹಿಸುವ ಪಾತ್ರ ಏನನ್ನು ತೋರಿಸುತ್ತದೆ ? ಅವ್ಯಕ್ತ ಭೀತಿ.

** ಶಿಕ್ಷಣ? ಇಂದಿನ ಕನಸುಗಳನ್ನು ನಾಳೆ ನನಸಾಗಿಸಲು ಈಗ ಹೂಡುವ ಬಂಡವಾಳ. ನನ್ನ ಕುಲದೀಪ ಎಂಜಿನಿಯರಿಂಗ್ ಪದವಿ ಗಳಿಸಿ ಅಮೆರಿಕಾಕ್ಕೆ

ಹೋಗದಿದ್ದರೆ ನನ್ನ ಬಾಳು ವ್ಯರ್ಥ ! ನನ್ನ ವಂಶೋದ್ಧಾರಕ ವೈದ್ಯನಾಗಿ ದೇಶವಿದೇಶ ಪರ್ಯಟನೆ ಮಾಡಿ ಭವ್ಯ ಶುಶ್ರೂಷಾಲಯ ಸ್ಥಾಪಿಸಿಯೇ ತೀರ ತಕ್ಕದ್ದು. ಇಂಥ 'ಘನ' ಉದ್ದೇಶ ಇಟ್ಟುಕೊಂಡಿರುವವರು ಭವಿಷ್ಯವಾಚಕರ ಆಕ್ಟೋಪಸ್ ಹಿಡಿತಕ್ಕೆ ಸುಲಭ ಗ್ರಾಸವಾಗದೆ ವಿಧಿ ಇಲ್ಲ.

*** ವ್ಯಾಪಾರ ? ಅಜ್ಞಾತ ಕುಬೇರಗಿರಿಯತ್ತ ಇಂದು ದಾಪುಗಾಲಿಡುತ್ತ ಧಾವಿಸುವ ಛಲ, ಮುಂದಿನ ತಿರುಗಾಸಿನಲ್ಲಿ ಹೊನ್ನ ಹೆಗ್ಗ ಎಡಹಿ ಸಂಧಿಸು ವನೆಂಬ ಭರವಸೆ. ಧರ್ಮರಾಯನಂಥ ಅಜಾತಶತ್ರುವೂ ಪಗಡೆ ದಾಳಗಳ ಜೊತೆ ಪಂದ್ಯಕ್ಕೆ ಇಳಿದದ್ದೇಕೆ ? ಮುಂದಿನ ಗರ ತನ್ನ ಪರವಾದೀತೆಂಬ ಅತುಳ ಆತ್ಮ ವಿಶ್ವಾಸವಿದ್ದುದರಿಂದ.

ಇರುವುದು ಹೇಗೂ ಇದ್ದೇ ಇದೆ. ಇದು ಕೈಮೇಲಿನ ಹಕ್ಕಿ. ಇರದುದು ಕೂಡ ಒದಗಿದರೆ ದ್ವಿಲಾಭ. ಎಂದೇ ಪೊದೆಯಲ್ಲಿರಬಹುದಾದ ಹಕ್ಕಿಯತ್ತ ಆಸೆನೋಟ. ಭವಿಷ್ಯದ ಬಗೆಗಿನ ಅದಮ್ಯ ಒಲುಮೆ ಭರವಸೆಗಳೇ ನಾಳಿನ ಪುಟ ವನ್ನು ಇಂದೇ ಓದಬೇಕೆಂಬ ತವಕದ ಮೂಲ. "ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ?"

## ಮೂರು ಮಾರ್ಗಗಳು

ಭವಿಷ್ಯವಾಚನ ಎಂಬ ಕುತೂಹಲ ತಣಿಸಲು ನಾವು ಪ್ರಯೋಗಿಸುವ ಎಲ್ಲ ವರಿಸೆಗಳೂ ಅಂತಿಮವಾಗಿ ಮೂರು ಮಾರ್ಗಗಳಲ್ಲಿ ಅಳವಡುತ್ತವೆ :

* ವ್ಯಾವಹಾರಿಕ ಮಾರ್ಗ. ನನ್ನ ನಿನ್ನೆಗಳ ಅಂತಿಮೋತ್ಪನ್ನ ಇಂದು ಎಂದರಿತು, ನಾನು ನಡೆದು ಬಂದ ಹಾದಿಯನ್ನು ಜ್ಞೇಯನಿಷ್ಠವಾಗಿ ಪರಾಂಬರಿಸಿ, ಲಭ್ಯ ಮಾಹಿತ್ಯಾನುಸಾರ ಇಂದನ್ನು ನಿಯಂತ್ರಿಸಿ ವರ್ತಮಾನ ದಲ್ಲಿ ಪ್ರಾಮಾಣಿಕವಾಗಿ ಬಾಳುವುದು, ಮತ್ತು ನಾಳಿನ ಬಗ್ಗೆ ಭರವಸೆ ತಳೆಯು ವುದು.ಒಂದು ಪಕ್ಷ ನಾಳೆ ನನ್ನ ನಿರೀಕ್ಷಾನುಸಾರ ಪ್ರತ್ಯಕ್ಷವಾಗದಿದ್ದರೆ, ಸಂದ ದಿನಗಳನ್ನು ಮಗುದೊಮ್ಮೆ ಪರಿಶೀಲಿಸಿ ಯುಕ್ತ ತಿದ್ದುಪಡಿಗಳನ್ನು ಕೈಗೊಳ್ಳು ವುದು. ಇದು ವೈಜ್ಞಾನಿಕ ವಿಧಾನ.

ವ್ಯಕ್ತಿಯ ಯಾವುದೇ ಚರ್ಯೆ ಅಂತಿಮವಾಗಿ ಸ್ವಂತ ಕ್ರಿಯೆಗಳ ಹಾಗೂ ಬಾಹ್ಯ ಪ್ರಭಾವಗಳ ಸಂಯುಕ್ತ ಫಲ. ಈ ಎರಡನೆಯವನ್ನು ನಿಯಂತ್ರಿಸ ಲಾಗಲೀ ನಿವಾರಿಸಲಾಗಲೀ ವ್ಯಕ್ತಿಗೆ ಸಾಧ್ಯವಾಗದಲ್ಲಿ ಅವುಗಳಿಗೆ ಅನುವರ್ತಿ ಯಾಗಿ ಸ್ವಂತ ಜೀವನ ರೂಪಿಸಿಕೊಳ್ಳುವುದೊಂದೇ ದಾರಿ. ನನ್ನ ಬದುಕಿನ

ಶಿಲ್ಪಿ ನಾನೇ ಎಂಬ ಕೆಚ್ಚಿನಿಂದ ಸಾಗುವ ಕ್ರಿಯಾಶೀಲ ಮಾರ್ಗವಿದು. ಅದೃಷ್ಟ ವನ್ನು ನೆಚ್ಚಿ ಕ್ರಿಯಾಶೂನ್ಯವಾಗುವ ಪಲಾಯನಸೂತ್ರವಲ್ಲ.

ನೊಬೆಲ್ ಪ್ರಶಸ್ತಿವಿಜೇತ ಖಭೌತವಿಜ್ಞಾನಿ ಎಸ್. ಚಂದ್ರಶೇಖರ್ (೧೯೧೦) ಹೇಳಿದ ಕತೆ :

ಹಾದಿಬದಿಯಲ್ಲಿ ಒಬ್ಬ ಕುರುಡ ತಿರುಪೆ ಬೇಡುತ್ತ ಕುಳಿತಿದ್ದಾನೆ. ನಸುಕು ಹರಿಯುವಲ್ಲಿಂದ ಇರುಳು ಮುಸುಕುವ ತನಕ ಅಲ್ಲೇ ಅವನ ಠಿಕಾಣಿ. ಗೌಳಿಯೊಬ್ಬಳು ಲಗುಬಗೆಯಿಂದ ಹೆಜ್ಜೆ ಹಾಕುತ್ತ ಬರುತ್ತಿರುವುದು ಅವನಿಗೆ ಕೇಳಿಸುತ್ತದೆ. ಅಷ್ಟರಲ್ಲೇ ಆಕೆ ಹಾದಿ ನಡುವಿನ ಕಲ್ಲೆಡಗಿ ಮುಗ್ಗರಿಸುತ್ತಾಳೆ. ಕಲ್ಲಿಗೆ ಸಾವಿರ ಶಾಪ ಹಾಕಿ ಮುನ್ನಡೆಯುತ್ತಾಳೆ. ಸೈಕಲ್ ಸವಾರನ ಕಿಣಿ ಮಿಣಿ ಗಂಟೆ. ಇಲ್ಲ—ಢಕ್ಕನೆ ಕಲ್ಲಿಗೆ ಚಕ್ರ ಹೆಟ್ಟಿ ಸಮತೋಲ ತಪ್ಪಿ ಆತ ಬೀಳುತ್ತಾನೆ. ಕಲ್ಲಿನ ಕುಲಗೋತ್ರ ಝಾಡಿಸಿ ಮುಂದೋಡುತ್ತಾನೆ. ಈಗ ಇದಾರು ? ಮಗುವಿನ ಕೇಕೆ. ತಾಯಿಯ ಲಲ್ಲೆಮಾತು. ಈ ಸಂತೋಷ ಸಂಭ್ರಮ ಅನುರಣಿಸುತ್ತಿದ್ದಂತೆ ಪುಟ್ಟ ಕಂದ ಅದೇ ಕಲ್ಲು ಎಡಗಿ ಕೆಡೆಯು ತ್ತದೆ. ಅದರ ಘನ ರೋದನಧ್ವನಿ ಮತ್ತು ತಾಯಿಯ ಘೋರ ಗರ್ಜನೆಯ ಮೊಳಗು ಎಲ್ಲವೂ ಕುರುಡನ ಕಿವಿಗೆ ಬೀಳುತ್ತವೆ.

ಇಂಥ ಅನುಭವಮಾಲೆ ಆ ಹಗಲಿಡೀ ಅವನ ನೆನಪಿಗೆ ಜಮೆ ಆಗು ತ್ತದೆ. ಸಂಜೆ ಬಂದಿತು, ಇರುಳು ಕವಿಯಿತು, ಜನಸಂದಣಿ ನಿಂತಿತು. ದಾರಿ ನಿರ್ಜನ. ನೀರವ. ಕುರುಡ ತೆವಳಿ ಕಲ್ಲಿನ ತಾಣ ತಲಪಿ ಅದನ್ನು ಕಿತ್ತು ದೂರಕ್ಕೆ ಎಸೆದ. ಆದರ ಬುಡದಲ್ಲೇನಿದೆ ಎಂದು ತಿಳಿಯಲು ಕುತೂಹಲದಿಂದಪರಡಿದ: ಅಲ್ಲಿ ಅಡಗಿ ಕುಳಿತಿದೆ ಹಿರಿಹೊನ್ನ ಹೆಗ್ಗ !

ಐನ್‌ಸ್ಟೈನ್ ಬರೆದಿದ್ದಾರೆ "ಸುಖಿಯಾದ ಒಬ್ಬ ವ್ಯಕ್ತಿ ವರ್ತಮಾನ ಕಾಲದ ಬಗೆಗೆ ಅದೆಷ್ಟು ಸಂತುಷ್ಟನಾಗಿರುವನೆಂದರೆ ಅವನೆಂದೂ ಭವಿಷ್ಯ ಕುರಿತು ಹೆಚ್ಚಿನ ಚಿಂತೆಯನ್ನೇ ಹಚ್ಚಿಕೊಳ್ಳುವುದಿಲ್ಲ. ತರುಣರಾದರೋ ದಿಟ್ಟ ಯೋಜನೆಗಳ ಬೆಂಬತ್ತಿ ಸಾಗುವುದೇ ಸದಾ ಅವರ ಪ್ರವೃತ್ತಿ. ತನ್ನ ಆಸೆ ಆಕಾಂಕ್ಷೆಗಳ ಲಕ್ಷ್ಯವೇನು ಎಂಬುದರ ಬಗೆಗೆ ಸಾಧ್ಯವಾಗುವಷ್ಟು ನಿಷ್ಕೃಷ್ಟ ಚಿತ್ರ ರೂಪಿಸಿಕೊಳ್ಳಬೇಕಾದದ್ದು ನಿಷ್ಠಾವಂತ ತರುಣನಿಗೆ ಸಹಜವಾದದ್ದೂ ಹೌದು."

** ಅದೃಷ್ಟ ಮಾರ್ಗ. ಮುಂದಿನ ತಿರುಗಾಸಿನಲ್ಲಿ ಖಾತ್ರಿ ಒಲಿಯಲಿದೆ ಅದೃಷ್ಟ ಎಂದು ಪ್ರಾಮಾಣಿಕವಾಗಿ ನಂಬಿ ಇಂದನ್ನು ನಿಷ್ಕ್ರಿಯತೆಯಲ್ಲಿಯೋ ಕನಸುಗಾರಿಕೆಯಲ್ಲಿಯೋ ಅರ್ಥಹೀನ ವಿಧಿವಿಧಾನಗಳ ಶುಷ್ಕ ಆಚರಣೆ ಯಲ್ಲಿಯೋ ಪೋಲುಮಾಡುವ ಕೆಲಸಗಳ್ಳರ ಆಸರೆ ಇದು. "ಒಳಿತು ಕೆಡುಕು ಗಳೆಲ್ಲವೂ ಅದೃಷ್ಟದ ಕೈವಾಡಗಳು. ಆದ್ದರಿಂದ ನಾನು ಮಾಡಬೇಕಾದ ಕೆಲಸ ಒಂದೇ : ನನ್ನ ಜೀವನದ ರೂವಾರಿಯಾದ 'ಆತನ'ನ್ನು ಒಲಿಸಲು ಪ್ರಯತ್ನ." ವಾಸ್ತವವಾಗಿ ಬದುಕಿನ ಸವಾಲುಗಳನ್ನು ನೇರ ಎದುರಿಸುವ ಅದಟು ಇರದ ಉತ್ತರಕುಮಾರರಿವರು. ಇಲ್ಲದ ಆ ಅದೃಷ್ಟ ಈ ಪಲಾಯನ ತಜ್ಞರನ್ನು ಹೇಗೆ ತಾನೇ ವರಿಸೀತು ? ನನ್ನ ಬದುಕಿನ ಶಿಲ್ಪಿ, ಧ್ರುವತಾರೆ, ನಿಯಂತ್ರಕ ಎಲ್ಲವೂ "ಅವನು" ಎಂದು ನಂಬಿದವರ ಕ್ರಿಯಾಶೂನ್ಯ ಪಥವೇ ಅದೃಷ್ಟ ಮಾರ್ಗ.

ಖಲೀಲ್ ಗಿಬ್ರಾನ್ ಹೇಳಿದ ಕತೆ :

ಅದೊಂದು ಸಿಡಿಲು ಮಿಂಚು ಬಿರುಗಾಳಿ ಇರುಳು. ಕಾರ್ಮೋಡಗಳೆಂಬ ಪರ್ವತಗಳು ಯುದ್ಧೋನ್ಮತ್ತವಾಗಿ ಢಿಕ್ಕಿ ಹೊಡೆದು ಪುಡಿಪುಡಿಯಾಗಿ ಜಡಿಮಳೆ ಬಿರುಮಳೆ ಆಲಿಕಲ್ಲುಮಳೆ ಭೂಮಿ ಮೇಲೆ ಸುರಿಯುತ್ತಿದೆಯೋ ಎಂಬ ಅನುಭವ. ಆ ಭೀಕರ ರಾತ್ರಿ ಅಲ್ಲಿಯ ಒಂಟಿ ಕಟ್ಟಡ ಇಗರ್ಜಿಯೊಳಗೆ ಪಾದ್ರಿ ಒಬ್ಬನೇ ಮಂಡಿಯೂರಿ ಶೂನ್ಯಕ್ಕೆ ದೃಷ್ಟಿ ಬೀರಿ ಪ್ರಕೃತಿಯ ವಿಕೋಪ ವನ್ನು ಗಮನಿಸುತ್ತಿದ್ದಾನೆ : ಭಯಕಂಪಿತನಾಗಿ ಪರಮಾತ್ಮಧ್ಯಾನನಿರತನಾಗಿ ದ್ದಾನೆ.

ಆಗ ಅಲ್ಲಿಗೊಬ್ಬಳು ಮಿಂಚಿನಂತೆ ಸೀಳಿ ಬಂದಳು—ಉದ್ವಿಗ್ನೆ, ಭಯ ವಿಹ್ವಲೆ, ಅನಾಥೆ. "ಪಾದ್ರಿಗಳೇ ! ನಾನು ಕ್ರಿಶ್ಚಿಯನ್ ಮಹಿಳೆ ಅಲ್ಲ. ನನಗೆ ಈ ಪ್ರಳಯತಾಂಡವದಿಂದ ರಕ್ಷಣೆ ದೊರೆತೀತೇ ?

ಆಕೆಯ ಯಾಚನಾದೃಷ್ಟಿ ನೋಡಿಯೂ ಆ ಧರ್ಮಗುರು ಅಪ್ಪಣೆ ಮಾಡುತ್ತಾನೆ "ಇಲ್ಲ. ನಿನಗೆ ರಕ್ಷಣೆ ದೊರೆಯದು. ಕ್ರಿಶ್ಚಿಯನ್ ಧರ್ಮ ದೀಕ್ಷೆ ಪಡೆದವರಿಗೆ ಮಾತ್ರ ಅದು ಮೀಸಲು.

ಕೊನೆಯ ಪದ ಆತನ ನಾಲಗೆಯಿಂದ ಉದುರುತ್ತಿದ್ದಂತೆಯೇ ಆ ಇಗರ್ಜಿಗೆ ಸಿಡಿಲು ಬಡಿದಿದೆ. ಇಡೀ ಮಂದಿರ ಅಗ್ನಿಗೆ ಆಹುತಿ ಆಗಿದೆ.

ಭಗವಂತನ ಕೋಪ ಕಂಡ ಹಳ್ಳಿ ಜನ ಧಾವಿಸ್ತಿ ಬಂದಿದ್ದಾರೆ: ಪಾದ್ರಿ ಇಗರ್ಜಿಯೊಳಗೆ ಅಗ್ನಿಗ್ರಾಸವಾಗಿ ಮಡಿದಿದ್ದಾನೆ, ಮಹಿಳೆ ಹೊರಗೆ ಮಳೆ ಯಿಂದ ತೋಯ್ದು ನಡುಗುತ್ತಿದ್ದಾಳೆ. ನಿಜ, ಅಂತಕನ ದೂತರಿಗೆ ಕಿಂಚಿತ್ತೂ ದಯವಿಲ್ಲ!

ನೊಬೆಲ್ ಪಾರಿತೋಷಿಕವಿಜೇತ ರಿಚರ್ಡ್ ಫೈನ್‌ಮನ್ ಬರೆದಿದ್ದಾರೆ "ನಾನೊಮ್ಮೆ ಹೊನೊಲುಲೂ ನಗರಕ್ಕೆ ಪ್ರವಾಸಿಯಾಗಿ ಹೋಗಿದ್ದೆ, ಅಲ್ಲಿಯ ಪ್ರಸಿದ್ಧ ಬೌದ್ಧ ದೇವಾಲಯಂದಲ್ಲಿ ಒಬ್ಬ ಭಿಕ್ಷು ನಮಗೆಲ್ಲ ಬೌದ್ಧ ಧರ್ಮದ ಬಗ್ಗೆ ಸ್ವಲ್ಪ ಪ್ರವಚನ ನೀಡಿದ. ಇದನ್ನು ಮುಗಿಸುವ ಮುನ್ನ "ಈಗ ನಾನು ನಿಮಗೆ ಹೇಳುವ ಸೂತ್ರವನ್ನು ನೀವು ಎಂದೆಂದೂ ಮರೆಯ ಲಾರಿರಿ" ಎಂದ. ನಿಜ, ನಾನದನ್ನು ಎಂದೂ ಮರೆಯಲಾರೆ. ಬೌದ್ಧ ಧರ್ಮದ ಆ ಸೂತ್ರವಿದು: ಪ್ರತಿಯೊಬ್ಬನಿಗೂ ಸ್ವರ್ಗದ್ವಾರದ ಕೀಲಿ ಕೊಟ್ಟಿದೆ; ಅದೇ ಕೀಲಿ ನರಕದ್ವಾರವನ್ನೂ ತೆರೆಯಬಲ್ಲದು."

ಅರ್ಥ ಏನು? ಸ್ವರ್ಗ-ನರಕ ನಮ್ಮೊಳಗಿವೆ, ನಮ್ಮ ಸೃಷ್ಟಿಗಳವು—ಅದೃಷ್ಟದ ದೇಣಿಗೆ-ಆಘಾತ ಅಲ್ಲ. ಕನಕನ ಕಿಂಡಿ ನೋಡುವ ಕಣ್ಣಿನಲ್ಲಿದೆ!

*** ಮಿಶ್ರಮಾರ್ಗ. ವಾಸ್ತವ ಜಗತ್ತಿನಲ್ಲಿ ನಾವು ಕಾಣುವುದು ಮಿಶ್ರ ಮಾರ್ಗಿಗಳನ್ನು. ಒಂದಲ್ಲ ಒಂದು ರೀತಿ ನಾವೆಲ್ಲರೂ ಅರ್ಧನಾರೀಶ್ವರರೇ. ನಾನೆಷ್ಟೇ ವೈಜ್ಞಾನಿಕ ಮನೋಧರ್ಮಪೂರಿತನಾದವನಾಗಿದ್ದರೂ ನಾನೆಷ್ಟೇ ವಿಚಾರವಾದಿಯೆಂದು ಆತ್ಮ ಸ್ಥೈರ್ಯ ತಳೆದವನಾಗಿದ್ದರೂ ವಿಪತ್ಪರಂಪರೆ ಗಳು ಪುಂಖಾನುಪುಂಖವಾಗಿ ಬಡಿದಪ್ಪಳಿಸಿ ನನ್ನ ಧೃತಿಯನ್ನೇ ಕುಂದಿಸಿದಾಗ ಸಾಕ್ಷಾತ್ ನನಗೆ ಆದರೂ, ಮನುಕುಲದ ಸುದೀರ್ಘ ಪರಂಪರೆಯ ಬಳುವಳಿ ಯಾಗಿ ಬಂದಿರುವ ಅಸಂಖ್ಯ ಕಲ್ಪನಾವಿಲಾಸ ಮೌಢ್ಯ ಅಂಧ ಶ್ರದ್ಧೆ ಅವಿಚಾರ ಮುಂತಾದವುಗಳ ಫಲವಾಗಿ, ಕನಸಿನಲ್ಲಾದರೂ ಅದೃಷ್ಟವನ್ನು ಹಳಿಯದಿರು ವುದು ಮತ್ತು ಮುಂದೊಂದು ದಿನ ಸುದಿನ ಆಗಬಹುದೆಂಬ ಆಶಾದೃಷ್ಟಿ ಯನ್ನು ಭವಿಷ್ಯದತ್ತ ಹರಿಯಗೊಡದಿರುವುದು ಪ್ರಾಯಶಃ ಸಾಧ್ಯವಾಗದು. ಹೀಗೆ ಯೋಚಿಸುವುದು ನಿಷ್ಪ್ರಯೋಜಕವೆಂದು ತಿಳಿದಿರುವಾಗಲೂ, ಒಂದು ತೆರನಾದ ಮಾನಸಿಕ ರಕ್ಷೆಯಾಗಿ, ಆಲಂಬನೆಯಾಗಿ ಅಥವಾ ವಿಮೋಚನೆಯಾಗಿ, ಈ ಧಾಟಿಯಲ್ಲಿ ಚಿಂತಿಸುವುದು ವಿರಳವೇನೂ ಅಲ್ಲ.

ಸಾರಾಂಶವೇನು ? "ಪುರುಷ ಪ್ರಯತ್ನ ಸರಿ. ಆದರೆ ದೈವಕಟಾಕ್ಷ ಅಗತ್ಯ." ಈ ನಿಲವು ಅಧಿಕಾಂಶ ಜನರ ವರ್ತಮಾನವನ್ನು ನಿಯಂತ್ರಿಸುತ್ತದೆ.

"ನನ್ನ ಮಗನನ್ನು ಐಎಎಸ್‌ಗಿರಿಗೆ ಉಡಾಯಿಸಿದ ಹೊರತು ನನಗೆ ಶಾಂತಿ ಇಲ್ಲ." ಹೀಗೆ ತೀರ್ಮಾನ ತಳೆಯುವ ತಂದೆ ತನ್ನ ಮುದ್ದು ಅಣುಗನಿಗೆ ಚಿಕ್ಕಂದಿನಿಂದಲೇ ಎಲ್ಲ ಬಗೆಯ ಶಿಕ್ಷಣ ಪೋಷಕಗಳನ್ನೂ ಜೀವಸತ್ತ್ವಗಳನ್ನೂ ಸಮೃದ್ಧವಾಗಿ ಊಡಿ ಬೆಳೆಸುತ್ತಾನೆ. ಜೊತೆಯಲ್ಲೇ, ಈ ಕುಲೋದ್ಧಾರಕನ ಭವಿಷ್ಯಮಾರ್ಗವನ್ನು ಸುಗಮಗೊಳಿಸಲು ಹರಕೆ ಪೂಜೆ, ಜಾತಕ ಅಧ್ಯಯನ, ಶಾಂತಿ ಹೋಮ ಮುಂತಾದ ಅರ್ಥಹೀನ ವಿಧಿಗಳಲ್ಲೂ ನಿರತನಾಗುತ್ತಾನೆ. ದೈವಚಿತ್ತವನ್ನು ತಿಳಿದು ಒಲಿಸಿಕೊಳ್ಳುವುದು ಈ ಪುರುಷಪ್ರಯತ್ನಧೀರನ ಜೀವನಕ್ರಮವೇ ಆಗುತ್ತದೆ.

## ಭವಿಷ್ಯಕುತೂಹಲ

ಆದಿಮಾನವನ ಕಾಲದಿಂದಲೂ ಭವಿಷ್ಯದ ಬಗೆಗಿನ ಕುತೂಹಲ ನಮ್ಮ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ಇದನ್ನು ಬುದ್ಧಿ ಮೌಢ್ಯ, ಮಾನಸಿಕ ಜಾಡ್ಯ, ಉತ್ತರಕುಮಾರ ಸಿದ್ಧಾಂತ, ಪಲಾಯನಧೀರರ ರಾದ್ಧಾಂತ ಎಂದು ಮುಂತಾಗಿ ತಿರಸ್ಕರಿಸುವುದರಿಂದ ಸಮಾಜವೇನೂ ರೋಗಮುಕ್ತವಾಗದು. ರೋಗದ ಮೂಲ ಅರಸಿ ಅದು ಹರಡುವ ರೀತಿಗಳನ್ನು ಶೋಧಿಸಿ, ಯುಕ್ತ ಪರಿಹಾರಗಳನ್ನು ಸೂಚಿಸುವುದೊಂದೇ ಸಮರ್ಪಕ ಮಾರ್ಗ. ಇಲ್ಲವಾದರೆ—"ಹಳೆಯ ನಂಬಿಕೆ ನಡವಳಿಕೆಗಳು ಸರಿಯೊ ತಪ್ಪೊ ಎಂದು ವಿಮರ್ಶಿಸಿ ನಿರ್ಣಯಿಸುವ ಜಾಣ್ಮೆ ಅಥವಾ ವೇಳೆ ನನಗಿಲ್ಲ. ಅವುಗಳಿಗೆ ಶರಣಾಗಿ ನೆಮ್ಮದಿ ಬಾಳನ್ನು ನಡೆಸುತ್ತಿದ್ದೇನೆ. ಅವು ನನ್ನನ್ನು ಹಾದಿಗೆಡಿಸಿರುವುದಿಲ್ಲ. ಬದುಕಿನಲ್ಲಿ ದುಗುಡ ದುಮ್ಮಾನ ದುಃಖ ಮುಂತಾದವು ಎದುರಾದಾಗ ಅವು ನನಗೆ ಸಾಂತ್ವನ ಊಡಿವೆ. ಈಗ ನೀವು ತರ್ಕ, ವಾದ, ಪುರಾವೆ ಮುಂತಾದವುಗಳ ಮೂಲಕ ನನ್ನ ಬುದ್ಧಿಗೆ ನಿಲುಕುವಂತೆ "ಅವೆಲ್ಲ ಅಬದ್ಧ. ಅವನ್ನು ತೊರೆಯುವುದರಿಂದ ನಿನ್ನ ಬಾಳು ಹಸನಾಗುತ್ತದೆ" ಎಂದು ವಿವರಿಸಿ ಒಪ್ಪಿಸಿರುವಿರಿ ನಿಜ. ಆದರೆ ಈ ಹಠಾತ್ 'ಉತ್ಪಾಟನೆ' ಅಥವಾ 'ನಿವಾರಣೆ' ನನ್ನಲ್ಲಿ ಒಂದು ತೆರನಾದ ಶೂನ್ಯ ನಿರ್ಮಿಸಿದೆ. ಕಾರಣ, ಈ ತೆರಪು ತುಂಬಲು ನೀವು ಬೇರೇನನ್ನೂ ಒದಗಿಸಿಲ್ಲ. ಬಂದ ನೀರು ಇದ್ದ ನೀರನ್ನೂ ಕೊಚ್ಚಿಕೊಂಡು

ಹೋಯಿತೆಂಬಂತಾಗಿದೆ ನನ್ನ ಮನಃಸ್ಥಿತಿ. ಕೊಳಚೆ ನೀರು ಉಳಿಯಲಿಲ್ಲ, ಒಳ್ಳೆ ನೀರು ದಕ್ಕಲಿಲ್ಲ. ಉಭಯ ನಷ್ಟ. ಅಲ್ಲದೇ ಹಳೆಯ ನಂಬಿಕೆ ನಡವಳಿಕೆಗಳು ಇಷ್ಟು ದೀರ್ಘಕಾಲ ನಮ್ಮ ಒಡನಾಡಿಗಳಾಗಿ ನಳನಳಿಸುತ್ತಿರುವುದೇ ಅವುಗಳ ಉಪಯುಕ್ತತೆ, ಅನಿವಾರ್ಯತೆ ಮತ್ತು ಸಾಧುತ್ವಗಳಿಗೆ ರುಜುವಾತಲ್ಲವೇ ? ರೋಗಕ್ಕಿಂತ ಚಿಕಿತ್ಸೆ ಅಧಿಕ ಮಾರಕವಾಗಬಾರದು''—ಈ ಮಾದರಿಯ ಪ್ರಾಮಾಣಿಕ ಹಾಗೂ ಸಕಾರಣ ವಾದವನ್ನು ನಮ್ಮ ನವಸಿದ್ಧಾಂತ ಕುಶಲಿಗಳು ಮತ್ತು ಆಧುನಿಕ ವಿಚಾರವಾದಿಗಳು ಎದುರಿಸಬೇಕಾಗುತ್ತದೆ.

ಭವಿಷ್ಯಕುತೂಹಲಿಗಳಿಗೆ ಎಲ್ಲ ಕಾಲಗಳಲ್ಲಿಯೂ ನಾನಾ ಬಗೆಯ ಆಕರ್ಷಕ ವಾಙ್ಮಯ ಒದಗುತ್ತಲೇ ಇರುವುದು. ಇಂದಿನದಿನಗಳಲ್ಲಂತೂ ವಿಜ್ಞಾನದ ಗ್ರಂಥಗಳನ್ನು ಮೀರಿ ಈ 'ಭವಿಷ್ಯ ಸತ್ಯಕಥನಗಳು' ಸಮೃದ್ಧವಾಗಿ ದೊರೆಯುತ್ತಿವೆ : The Prophecies of Nostradamus, The Further Prophecies of Nostradamus, The Final Prophecies of Nostradamus ಕೆಲವೇ ನಿದರ್ಶನಗಳು.

ವಿಖ್ಯಾತ ವಿಜ್ಞಾನಿ ಕಾರ್ಲ್ ಸಗಾನ್ ಬರೆದಿದ್ದಾರೆ "ಅಮೆರಿಕಾ ದೇಶದ ಯಾವುದೇ ಆಧುನಿಕ ನಗರದಲ್ಲಿ — ನ್ಯೂಯಾರ್ಕ್, ವಾಶಿಂಗ್ಟನ್, ಮಸ್ಸಾಚುಸೆಟ್ಸ್ ಇತ್ಯಾದಿ — ಪುಸ್ತಕದ ಅಂಗಡಿಗೆ ಹೋಗಿ ಖಗೋಳ ವಿಜ್ಞಾನ ಕುರಿತ ಒಂದು ನಿಯತಕಾಲಿಕೆ ಬೇಕೆಂದು ಕೇಳಿ. ಹೆಚ್ಚಿನ ಅಂಗಡಿಗಳಲ್ಲಿ ಅದು ನಿಮಗೆ ದೊರೆಯದು. ಆದರೆ ಪ್ರತಿಯೊಂದು ಅಂಗಡಿಯಲ್ಲಿಯೂ ಫಲಜ್ಯೋತಿಷ್ಯ ಕುರಿತಂತೆ ಹಲವಾರು ನಿಯತಕಾಲಿಕೆಗಳು ಸಿಕ್ಕುತ್ತವೆ !"

## ಭವಿಷ್ಯವಾಚನ ಹೇಗೆ ?

ಭವಿಷ್ಯ ಒಂದು ಕಲ್ಪನೆ ಅಲ್ಲ. ಅದೊಂದು ಭೌತ ಸತ್ಯ. ಭಾರತದಲ್ಲಿರುವ ನನಗೆ ದೂರದ ಲಂಡನ್ನಿನಲ್ಲಿರುವ ಬ್ರಿಟಿಷ್ ರಾಣಿ ಹೇಗೆ 'ಭೌತ ಸತ್ಯ' ವೋ ಹಾಗೆ ೧೯೯೨ರಲ್ಲಿ ಜೀವಿಸಿರುವ ನನಗೆ ೨೦೯೨ ಕೂಡ 'ಭೌತ ಸತ್ಯ.' ೨೦೯೨ ಬಂದೇ ಬರುತ್ತದೆ. ಅದನ್ನು ಸ್ವಾಗತಿಸಲು ನಾನು ಇರಬಹುದು, ಇಲ್ಲದಿರಬಹುದು. ಆದರೆ ಅದು ಬರುವುದಂತೂ ಖರೆ. ಹೇಗೆ ಬರುತ್ತದೆ ? ಅದರ ಮರ್ಜಿಗೆ ಅಥವಾ ನಿಯಮಗಳಿಗೆ ಅನುಸಾರವಾಗಿ, ನನ್ನ ಇಷ್ಟಾನಿಷ್ಟಾನುವರ್ತಿಯಾಗಿ ಅಲ್ಲ. ಭವಿಷ್ಯದ ಖಚಿತ ಆಗಮನ ನನಗೆ ತಿಳಿಯುವುದು

ಕಾಲದ ಹರಿವಿನಿಂದ, ಹಗಲಿರುಳುಗಳ ಮುನ್ನಡೆಯಿಂದ, ಋತುಚಕ್ರದ ಉರುಳಾಟದಿಂದ, ನಿಸರ್ಗದಲ್ಲಿ ಕಂಡುಬರುವ ವ್ಯತ್ಯಾಸಗಳಿಂದ ಮತ್ತು ನಮ್ಮೊಳಗಾಗುವ ಬದಲಾವಣೆಗಳಿಂದ.

ಕ್ರಿಸ್ತಶಕ ಒಂದನೆಯ ಶತಮಾನದಲ್ಲಿ ಬಾಳಿದ ರೋಮನ್ ರಾಜಕಾರಣಿ ಮತ್ತು ತತ್ತ್ವಶಾಸ್ತ್ರಜ್ಞ ಸೆನೆಕಾ ಭವಿಷ್ಯ ಹೇಗೆ ವರ್ತಮಾನವಾಗುತ್ತದೆ ಎಂಬುದನ್ನು ವರ್ಣಿಸಿರುವ ಪರಿ "ಈಗ ನಮ್ಮಿಂದ ಮರೆಯಾಗಿರುವ ಸಂಗತಿಗಳು, ಸಾಕಷ್ಟು ದೀರ್ಘಕಾಲ ನಡೆಸುವ ಸಂಶೋಧನೆಯ ಫಲವಾಗಿ, ಬೆಳಕು ಕಾಣುವ ದಿನ ಬಂದೇ ಬರುತ್ತದೆ. ಆಕಾಶದಂಥ ಅತ್ಯಗಾಧ ವ್ಯಾಪ್ತಿಯನ್ನು ಅನ್ವೇಷಿಸಲು ಒಂದು ತಲೆಮಾರಿನ ಆಯುಷ್ಯವನ್ನು ಪೂರ್ತಿ ಮೀಸಲಿಟ್ಟರೂ ಸಾಲದು......ಇಂತಿದ್ದರೂ ಆಕಾಶದ ಬಗೆಗಿನ ಜ್ಞಾನ ಉತ್ತರೋತ್ತರ ಯುಗಗಳ ದೀರ್ಘಾವಧಿಗಳಲ್ಲಿ ಕ್ರಮೇಣ ಅನಾವರಣಗೊಳ್ಳಲಿದೆ. ನಮ್ಮ ಕುಲಸಂಜಾತರಾಗಿ ಬರುವ ಮುಂದಿನ ಯಾವುದೋ ಪೀಳಿಗೆಯ ಜನರು, ತಮಗೆ ಅಷ್ಟು ಸುಂದರವಾಗಿಯೂ ಸುಲಭವಾಗಿಯೂ ಮನವರಿಕೆಯಾಗಿರುವ ಸಂಗತಿಗಳು, ತಮ್ಮ ಪೂರ್ವಜರಾದ ನಮಗೆ ತಿಳಿದೇ ಇರಲಿಲ್ಲವಲ್ಲ ಎಂದು ಅಚ್ಚರಿಪಡುವ ಕಾಲ ಬಂದೇಬರುತ್ತದೆ. ಅನೇಕ ಆವಿಷ್ಕಾರಗಳು ಭವಿಷ್ಯದ ಯುಗಗಳಿಗಾಗಿ ಕಾಯ್ದಿರಿಸಲ್ಪಟ್ಟಿವೆ. ಆದರೆ ಆ ವೇಳೆಗೆ ನಮ್ಮ ಬಗೆಗಿನ ನೆನಪು ಮಾಸಿಹೋಗಿರುತ್ತದೆ. ಪ್ರತಿಯೊಂದು ಯುಗದಲ್ಲಿಯೂ ಅನ್ವೇಷಣೆಗೆ ನೂತನ ವಿಷಯ ಒದಗಿರದಿದ್ದರೆ ಈ ವಿಶ್ವವೊಂದು ಅಲ್ಪ ಮತ್ತು ರಿಕ್ತಯಂತ್ರವಾಗಿರುತ್ತಿತ್ತು. ನಿಸರ್ಗವೆಂದೂ ತನ್ನ ನಿಗೂಢ ರಹಸ್ಯಗಳನ್ನು ಒಮ್ಮೆಗೇ ಆಗಲಿ ಎಲ್ಲರಿಗೂ ಆಗಲಿ ಬಿಟ್ಟುಕೊಡುವುದಿಲ್ಲ."

ಖಗೋಳವಿಜ್ಞಾನದ ಮುನ್ನಡೆಗೆ ಅರಿಸ್ಟಾಟಲ್ (ಕ್ರಿ ಪೂ ೩೮೪-೩೨೨) ನಿಕೊಲಾಸ್ ಕೋಪರ್ನಿಕಸ್ (ಕ್ರಿ ಶ ೧೪೭೩-೧೫೪೩), ಗೆಲಿಲಿಯೋ ಗೆಲಿಲೀ (೧೫೬೪-೧೬೪೨), ಯೋಹನ್ ಕೆಪ್ಲರ್ (೧೫೭೧-೧೬೩೦), ಐಸಾಕ್, ನ್ಯೂಟನ್ (೧೬೪೨-೧೭೨೭), ಕಾರ್ಲ್ ಫ್ರೀಡರಿಚ್‌ಗೌಸ್ (೧೭೭೭-೧೮೫೫) ಮತ್ತು ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ನೀಡಿರುವ ಕೊಡುಗೆಗಳು ಯುಗಪ್ರವರ್ತಕಗಳೆನ್ನಿಸಿವೆ.

ಅರಿಸ್ಟಾಟಲ್ : ಭೂಕೇಂದ್ರವಾದದ ಪ್ರವರ್ತಕ. ಈತನ ಪ್ರಕಾರ ವಿಶ್ವದ ಕೇಂದ್ರದಲ್ಲಿ ಭೂಮಿ ಸ್ಥಿರವಾಗಿ ನಿಂತಿದೆ. ಭೂಮಿಯ ಸುತ್ತ ಸಮಸ್ತ

ಆಕಾಶಕಾಯಗಳೂ ವಿಭಿನ್ನ ದೂರಗಳಲ್ಲಿ ವಿವಿಧ ವೇಗಗಳಿಂದ ವರ್ತುಳೀಯ ಕಕ್ಷೆಗಳನ್ನು ರೇಖಿಸುತ್ತ ಚಲಿಸುತ್ತಿವೆ. ಆಕಾಶ ವಿದ್ಯಮಾನಗಳ ವೈಜ್ಞಾನಿಕ ಅಧ್ಯಯನ ವಿವರಣೆಗಳಿಗೆ ಈ ವಾದ ನಾಂದಿಹಾಕಿತು.

ಕೊಪರ್ನಿಕಸ್ : ಸೂರ್ಯಕೇಂದ್ರವಾದದ ಪ್ರವರ್ತಕ. ಈತನ ಪ್ರಕಾರ ವಿಶ್ವಕೇಂದ್ರ ಸೂರ್ಯ—ಭೂಮಿ ಅಲ್ಲ. ಸೂರ್ಯನ ಸುತ್ತ ಸಮಸ್ತ ಆಕಾಶಕಾಯಗಳೂ, ಭೂಮಿಯೂ ಸೇರಿದಂತೆ, ಪರಿಭ್ರಮಿಸುತ್ತಿವೆ. ಭೂ ಕೇಂದ್ರವಾದವನ್ನು ಆಧರಿಸಿ ಗಗನ ಘಟನೆಗಳನ್ನು ಅರ್ಥವಿಸಲು ತೊಡಗಿದಾಗ ಎದುರಾದ ಅಸಂಖ್ಯ ವ್ಯಾಘಾತಗಳನ್ನು ಈ ನೂತನ ಮತ್ತು ವಾಸ್ತವತಾ ಸಮೀಪ ವಾದ ತೊಡೆದುಹಾಕಿ ಆಕಾಶಾಧ್ಯಯನಕ್ಕೆ ಅಧಿಕ ವಿಶ್ವಾಸಾರ್ಹ ಪ್ರತಿ ರೂಪವನ್ನು ಒದಗಿಸಿತು.

ಗೆಲಿಲಿಯೋ : ಸೂರ್ಯ ಜಗದೇಕಚಕ್ಷುವಲ್ಲ. ಆಕಾಶಗಂಗೆ ಅಸಂಖ್ಯ ಸೂರ್ಯಗಳ ಸಮುದಾಯ. ನಮ್ಮ ಚಂದ್ರ ಸೌರವ್ಯೂಹದ ಏಕೈಕ ಉಪಗ್ರಹ ವಲ್ಲ. ಗುರುವಿಗೆ ನಾಲ್ಕು ಉಪಗ್ರಹಗಳಿವೆ. ಇವೆಲ್ಲ ಈ ವಿಜ್ಞಾನಿಯ ಸಾಧನೆ ಗಳು. ಈತ ಬಲ-ಚಲನೆ ಸಂಬಂಧವನ್ನು ವಿಜ್ಞಾನದ ಖಚಿತ ಪರಿಭಾಷೆ ಯಲ್ಲಿ ನಿರೂಪಿಸಿದ. ಅಂದರೆ ಸೌರವ್ಯೂಹದ ಯಾಂತ್ರಿಕ ಪ್ರತಿರೂಪ ರಚಿಸು ವತ್ತ ಗಮನಾರ್ಹ ಮುನ್ನಡಿ ಇಟ್ಟ.

ಕೆಪ್ಲರ್ : ಸೂರ್ಯನ ಸುತ್ತ ಗ್ರಹಗಳು ಉರುಳುವ ಪರಿಯನ್ನು ಮೂರು ಪ್ರಸಿದ್ಧ ಗಣಿತ ನಿಯಮಗಳ ಮೂಲಕ ವಿವರಿಸಿದ. ಸೂರ್ಯ-ಗ್ರಹ ಸಂಬಂಧವೇನು ? ಪರಸ್ಪರ ಸ್ಥಾನಗಳು, ಗ್ರಹಕಕ್ಷೆಯ ಧಾತುಗಳು ಮುಂತಾ ದವನ್ನು ಗಣಿತ ಪರಿಭಾಷೆಯಲ್ಲಿ ನಿರೂಪಿಸಿ ಸೌರವ್ಯೂಹದ ಗಣಿತೀಯ ಅಧ್ಯ ಯನಕ್ಕೆ ನಡೆಹಾಕಿದ.

ನ್ಯೂಟನ್ : ಕೆಪ್ಲರ್ ವಿವರಿಸಿದ ರೀತಿಯಲ್ಲೇ ಸೌರವ್ಯೂಹ ಏಕೆ ಇರ ಬೇಕು ? ಈ ಪ್ರಶ್ನೆಗೆ ಉತ್ತರ ನ್ಯೂಟನ್ ಆವಿಷ್ಕರಿಸಿದ ವಿಶ್ವಗುರುತ್ವಾಕ ರ್ಷಣ ನಿಯಮ. ಸೂರ್ಯ-ಗ್ರಹ ನಡುವೆ ವರ್ತಿಸುವ ಗುರುತ್ವಬಲ ಗ್ರಹಕ್ಕೆ ಕೆಪ್ಲರ್ ವಿವರಿಸಿದ ತೆರನಾದ ಚಲನೆಯನ್ನು ಮಾತ್ರ ಕೊಡಬಲ್ಲದೆಂದು ಸಾಧಿಸಿದ.

ಗೌಸ್ : ನ್ಯೂಟನ್ ಚೌಕಟ್ಟಿನೊಳಗೆ ಕ್ಷುದ್ರ ಗ್ರಹಗಳ ವರ್ತನೆ ವಿವರಿ ಸುವ ಸೂಕ್ಷ್ಮ ಗಣಿತ ಶೋಧಿಸಿ ಖಗೋಳವಿಜ್ಞಾನದ ಮುನ್ನಡೆಗೆ ಕುಮ್ಮಕ್ಕು

ನೀಡಿದ. ಅಂದರೆ ಗೆಲಿಲಿಯೊ–ಕೆಪ್ಲರ್–ನ್ಯೂಟನ್ ನಿರೂಪಿಸಿದ ಗಣಿತೀಯ ವಿಧಾನದಿಂದ ಸೌರವ್ಯೂಹದೊಳಗಿನ ಸಮಸ್ಯೆಗಳಿಗೆ ಪರಿಹಾರ ಅರಸಲು ಖಚಿತ ಮಾರ್ಗ ಗೌಸ್–ಗಣಿತದಿಂದ ತಿಳಿಯಿತು.

ಐನ್‌ಸ್ಟೈನ್ : ವಿಶ್ವವಿದ್ಯಮಾನಗಳ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ವ್ಯಾಖ್ಯಾನಿಸುವಲ್ಲಿ ನ್ಯೂಟನ್–ಸಿದ್ಧಾಂತ ಸೋಲುತ್ತಿದ್ದುದು ಗೊತ್ತಾಯಿತು. ಅಂದರೆ ವೀಕ್ಷಿತ ಮಾಹಿತಿಗಳನ್ನು ಈ ಸಿದ್ಧಾಂತ ಸಂಗತವಾಗಿ ಬೆಸೆಯಲಾರ ದಾಯಿತು. ಇದರ ಅರ್ಥ : ನಾವು ಬಳಸುತ್ತಿರುವ ಉಪಕರಣ/ಸಿದ್ಧಾಂತ ಅಪರಿಪೂರ್ಣ ಎಂದು. (ಹಿಂದೆ ಅರಿಸ್ಟಾಟಲ್- ಸಿದ್ಧಾಂತ ಸೋತದ್ದೂ ಅದರ ಸ್ಥಾನವನ್ನು ಕೊಪರ್ನಿಕಸ್–ಸಿದ್ಧಾಂತ ಗಳಿಸಿದ್ದೂ ಹೇಗೂ ಸ್ಪಷ್ಟ ನಿದರ್ಶನ ಗಳಾಗಿವೆಯಷ್ಟೆ.) ಈ ಕೊರತೆಯನ್ನು ಐನ್‌ಸ್ಟೈನ್ ಮಂಡಿಸಿದ ಸಾಪೇಕ್ಷತಾ ಸಿದ್ಧಾಂತ ತುಂಬಿಕೊಟ್ಟಿತು.

ಈ ಎಲ್ಲ ವಿಜ್ಞಾನಿಗಳ ಬುದ್ಧ್ಯಂಕಗಳನ್ನೂ ನಿರಪೇಕ್ಷವಾಗಿ ಪರಿಶೀಲಿ ಸೋಣ. ಅಂದರೆ, ಅವರು ಯಾವುದೇ ಜಟಿಲ ನೂತನ ಸಮಸ್ಯೆಯನ್ನು ಸ್ವೀಕರಿಸಿ, ಅದರ ಸರ್ವಮುಖಗಳನ್ನೂ, ವರ್ತಮಾನ ಜ್ಞಾನದ ಮುನ್ನೆಲೆ ಯಲ್ಲಿ ಜ್ಞೇಯನಿಷ್ಠವಾಗಿ ವಿಮರ್ಶಿಸಿ, ಅವಶ್ಯವೆನ್ನಿಸಿದರೆ ನೂತನ ಸಿದ್ಧಾಂತ ವನ್ನೇ ರೂಪಿಸಿ, ಅದನ್ನು ಸಮರ್ಪಕವಾಗಿ ಪರಿಹರಿಸುವ ಸಾಮರ್ಥ್ಯ. ಈ ಎಲ್ಲ ಬಿಡಿ ಸಂಗತಿಗಳನ್ನೂ ಪರಿಮಾಣಗಳಿಗೆ/ಅಂಕಗಳಿಗೆ ಇಳಿಸಿ ಪ್ರತಿಯೊಬ್ಬನ ಬುದ್ಧ್ಯಂಕವನ್ನೂ ಗಣಿಸುವುದು ಸಾಧ್ಯವಿದೆ. ಇಂಥ ಪರಿಗಣನೆಯಲ್ಲಿ ವೈಯ ಕ್ತಿಕ ರಾಗ ಭಾವಗಳಿಗಾಗಲೀ ಆಸೆ ಆದ್ಯತೆಗಳಿಗಾಗಲೀ ಅವಕಾಶವಿಲ್ಲ.

ಬುದ್ಧ್ಯಂಕಗಳ ಪ್ರಕಾರ ಯುಗಪ್ರವರ್ತಕ ವಿಜ್ಞಾನಿಗಳೆಲ್ಲರೂ ಒಂದೇ ಮಟ್ಟದಲ್ಲಿರುವರು. ಉದಾಹರಣೆಗೆ ಅರಿಸ್ಟಾಟಲ್–ಐನ್‌ಸ್ಟೈನ್ ನಡುವಿನ ಕಾಲವ್ಯತ್ಯಾಸ ಹಲವು ಶತಮಾನಗಳೇ ಆಗಿದ್ದರೂ ಇಬ್ಬರನ್ನೂ ಒಂದೆಡೆ ಕೂರಿ ಸಿದರೆ ಅವರು ಪರಸ್ಪರ ಚೆನ್ನಾಗಿ ಅರಿತು ಅರ್ಥಪೂರ್ಣ ಸಂಭಾಷಣೆಯಲ್ಲಿ ಮಗ್ನರಾಗಬಲ್ಲರು.

ಹಾಗಾದರೆ, ತಾತ್ತ್ವಿಕವಾಗಿ. ವಿಜ್ಞಾನದ ಸಮಸ್ತ ಆವಿಷ್ಕಾರಗಳೂ ಒಮ್ಮೆಗೇ ಏಕೆ ಆಗಲಿಲ್ಲ ? ಉದಾಹರಣೆಗೆ ಐನ್‌ಸ್ಟೈನ್ ಮಾಡಿದ ಸಂಶೋ ಧನೆಯನ್ನು ಅರಿಸ್ಟಾಟಲ್ ಮಾಡಲಿಲ್ಲವೇಕೆ ? ಮಾನವ ಚಂದ್ರನ ಮೇಲೆ ಕಾಲಿಡಲು ೧೯೬೯ರ ತನಕ ಕಾಯಬೇಕಾಯಿತೇಕೆ ? ದೂರದರ್ಶನ ಇಲ್ಲವೇ ರೇಡಿಯೊ ಕಲ್ಪನೆ ಕೂಡ ನ್ಯೂಟನ್ ಕಾಲದಲ್ಲಿ ಹೊಳೆಯಲಿಲ್ಲವೇಕೆ ?

ಹಿಂದೆ ಉಲ್ಲೇಖಿಸಿರುವ ಸೆನೆಕಾ ಹೇಳಿಕೆಯಲ್ಲಿ ಈ ಪ್ರಶ್ನೆಗಳಿಗೆ ಉತ್ತರ ಇದೆ "ನಿಸರ್ಗವೆಂದೂ ತನ್ನ ನಿಗೂಢ ರಹಸ್ಯಗಳನ್ನು ಒಮ್ಮೆಗೇ ಆಗಲಿ ಎಲ್ಲರಿಗೂ ಆಗಲಿ ಬಿಟ್ಟುಕೊಡುವುದಿಲ್ಲ." ಮಾನವಮತಿ-ನಿಸರ್ಗ ಅಂತರ ಕ್ರಿಯೆಯ ಉತ್ಪನ್ನವೇ ವಿಜ್ಞಾನ. ಆದ್ದರಿಂದ ಮಾನವಮತಿಯ ಮಟ್ಟ — ಅಂದರೆ ನಾಗರಿಕತೆಯ ಮಟ್ಟ — ಏರಿದಂತೆ ವಿಜ್ಞಾನದ ಮಟ್ಟವೂ ಏರುತ್ತದೆ. ಸದಾ ಬೆಳೆದು ಅಭಿವರ್ಧಿಸುತ್ತಿರುವ ಜೀವಂತ ದ್ರವ್ಯ ವಿಜ್ಞಾನ.

ನಾಗರಿಕತೆ ನಿಂತ ನೀರಲ್ಲ, ಹರಿಯುತ್ತಿರುವ ಸಲಿಲ. ಎಂದೇ ಅದು ಕಾಲದಿಂದ ಕಾಲಕ್ಕೆ ವರ್ಧಿಸುತ್ತ ಹೋಗುತ್ತದೆ. ಇದರ ಅರ್ಥ : ಕ್ರಿಪೂ ೩ನೆಯ ಶತಮಾನದ ನಾಗರಿಕತೆಯ ಮಟ್ಟಕ್ಕಿಂತ ಕ್ರಿಶ ೨೦ನೆಯ ಶತಮಾನದ ನಾಗರಿಕತೆಯ ಮಟ್ಟ ಎತ್ತರದಲ್ಲಿರುತ್ತದೆ ; ಅಂತೆಯೇ ಕ್ರಿಶ ೪೦ನೆಯ ಶತಮಾನದಲ್ಲಿ ಅದು ಇನ್ನೂ ಉನ್ನತ ಸ್ಥಾನ ಏದಿರುತ್ತದೆ.

ಈಗ, ಯಾವ ವ್ಯಕ್ತಿಯೇ ಆಗಲಿ, ಎಂಥ ಮೇಧಾವಿಯೇ ಆಗಿರಲಿ, ಸ್ಫೂರ್ತಿದೀಪ್ತ ಸಂತನೇ ಇರಲಿ — ಆತ ಸಮಕಾಲೀನ ನಾಗರಿಕತೆಯ ಶಿಶು. ಎಂದೇ ಈ ಸಮಕಾಲೀನ ನಾಗರಿಕತೆ ವ್ಯಾಖ್ಯಿಸುವ ಮಟ್ಟಕ್ಕಿಂತ ಬಹಳ ಎತ್ತರಕ್ಕೇನೂ ಆತ ಜಿಗಿಯಲಾರ. ಅಂದರೆ ೨೦ನೆಯ ಶತಮಾನದ ಸೀಮಾಪುರುಷ — ಈತ ಯಾವ ಕ್ಷೇತ್ರಕ್ಕೆ ಸಂಬಂಧಿಸಿದವನಾಗಿದ್ದರೂ — ೪೦ನೆಯ ಶತಮಾನದ ನಾಗರಿಕತೆ ಕುರಿತು ಯಾವ ನಿರ್ದಿಷ್ಟ ಊಹೆಯನ್ನೂ (ಸಿದ್ಧಾಂತ ಹಾಗಿರಲಿ) ಮುಂಡಿಸಲಾರ. ಅರಿಸ್ಟಾಟಲ್ ಹೇಗೆ ನ್ಯೂಟನ್ನನನ್ನೂ ನ್ಯೂಟನ್ ಹೇಗೆ ಐನ್‌ಸ್ಟೈನನನ್ನೂ ಮುಂಗಾಣಲಾರದವರಾಗಿದ್ದರೋ ಹಾಗೆ ಐನ್‌ಸ್ಟೈನ್ ೪೦ನೆಯ ಶತಮಾನದ ಒಬ್ಬ ಸೀಮಾಪುರುಷನನ್ನು ಮುಂಗಾಣಲಾರದವರಾಗಿದ್ದರು.

ಇದೊಂದು ಸಾರ್ವತ್ರಿಕ ನಿಯಮ. ಪ್ರವಾದಿ ಪುರುಷೋತ್ತಮರಿಗೂ ಸಾಧುಸಂತರಿಗೂ ಭಗವದಂಶ ಸಂಭೂತರಿಗೂ ಅವತಾರ ಚೇತನಗಳಿಗೂ ವಿಜ್ಞಾನಿಶ್ರೇಷ್ಠರಿಗೆ ಅನ್ವಯವಾಗುವಷ್ಟೇ ನಿಷ್ಠುರವಾಗಿ ಅನ್ವಯವಾಗುವ ನೈಸರ್ಗಿಕ ನ್ಯಾಯ. ಕಾಲದ ನಿಕಷದಲ್ಲಿ ಪಕ್ಷಪಾತ ಇಲ್ಲ, ಅಪವಾದ ಇಲ್ಲ.

ಅಂದ ಮೇಲೆ "ಭವಿಷ್ಯವಾಚನ ಹೇಗೆ ?" ಎನ್ನುವ ಪ್ರಶ್ನೆಗೆ ಉತ್ತರವೇನು ? ಕಾಲಾಯ ತಸ್ಮೈ ನಮಃ ಎನ್ನುತ್ತ ಯಥಾಸ್ಥಿತಿಗೆ ಶರಣಾಗಿ ಭವಿಷ್ಯ ವರ್ತಮಾನವಾಗುವ ತನಕ ಅದನ್ನು ಕಾದಿದ್ದು ಯುಕ್ತ ವೇಳೆಯಲ್ಲಿ ಅನುಭವಿಸುವುದು ಮಾತ್ರ.

೨

ಸರಿ. ಆದರೂ...... ಅದನ್ನು 'ಓದುವುದು' ಇಲ್ಲವೇ 'ನೋಡುವುದು' ಸಾಧ್ಯವಾದರೆ ಎಷ್ಟು ಅನುಕೂಲ ಎಂದು ಭಾವಿಸಿದ ಮಾನವಮತಿ ಅತ್ತ — ಭವಿಷ್ಯದ ಅವ್ಯಕ್ತದತ್ತ — ತನ್ನ ಆಸೆ ನೋಟ ಬೀರುವುದು ಅಸಹಜವಲ್ಲ. ಹೀಗೆ ಭವಿಷ್ಯವಾಚನಕ್ಕೆ ಪ್ರಾಮುಖ್ಯ ಒದಗಿತು.

ಇದರಲ್ಲಿ ಎರಡು ಮುಖ್ಯ ಮಾರ್ಗಗಳನ್ನು ಕಾಣುತ್ತೇವೆ : ವೈಜ್ಞಾನಿಕ ಮಾರ್ಗ, ಊಹನಾ ಮಾರ್ಗ.

## ವೈಜ್ಞಾನಿಕ ಮಾರ್ಗ

ಎಲ್ಲ 'ನಿನ್ನೆ'ಗಳ ಹೆಗಲ ಮೇಲೆ 'ಇಂದು' ನಿಂತಿದ್ದು 'ನಾಳೆ' ಗಳತ್ತ ನೋಟ ಚಾಚುತ್ತಿದೆ ಎಂದು ಚೆನ್ನಾಗಿ ಅರಿತಿರುವ ವಿಜ್ಞಾನಿ ನಾಳೆಗಳ ಬಗ್ಗೆ ತೀವ್ರ ಕುತೂಹಲಿ ಆಗಿದ್ದಾನೆ. ಆದರೆ ಈ ಕುತೂಹಲ ಬಿಡಿ ವ್ಯಕ್ತಿಯೊಬ್ಬನಿಗೆ ತನ್ನ ನಾಳೆಗಳ ಬಗ್ಗೆ ಇರುವ 'ಉನ್ಮಾದಾಸಕ್ತಿ'ಗಿಂತ ಭಿನ್ನವಾದದ್ದು. ದಂಡೆಯಲ್ಲಿ ನಿಂತು ಹೊಳೆಯ ಮುನ್ನೋಟವನ್ನು ಚಿಕಿತ್ಸಕವಾಗಿ ಗಮನಿಸುವ ನಿರಪೇಕ್ಷ ವೀಕ್ಷಕನ ಕುತೂಹಲದಂತೆ ವಿಜ್ಞಾನಿಯದು ; ಬಿಡಿ ವ್ಯಕ್ತಿಯದಾದರೋ ನೀರಿನ ಸೆಳವಿಗೆ ಬಿದ್ದು ತೇಲುತ್ತ ಮುಳುಗುತ್ತ ಹೊನಲು ಒಯ್ದೆಡೆಗೆ ಹೋಗುತ್ತ, ಇರುವ ಅನಾಥನ ಕುತೂಹಲಕ್ಕೆ ಸಮಾನವಾದದ್ದು (ಈ ಎರಡನೆಯದನ್ನು ಮುಂದೆ 'ಊಹನಾ ಮಾರ್ಗ' ವಿಭಾಗದಲ್ಲಿ ವಿಶ್ಲೇಷಿಸಿದೆ.)

ನಾಗರಿಕತೆ ಹರಿದಂತೆ, ಅಂದರೆ ಜ್ಞಾನ ವಿಜ್ಞಾನಗಳು ಹಂತಹಂತವಾಗಿ ಅಭಿವರ್ಧಿಸಿದಂತೆ, ನಮ್ಮ ಪರಮಭ್ರಾಂತಿಜನ್ಯ ಕಲ್ಪನೆಗಳಿಗೂ ಅತ್ಯಂತ ಕ್ರಾಂತಿಕಾರಿ ಊಹಾಪೋಹಗಳಿಗೂ ಎಟುಕದ ಗಹನ ಸತ್ಯಗಳು ಪ್ರತ್ಯಕ್ಷವಾಗುವುವೆಂಬ ದೃಢ ಭರವಸೆ ಆತನಿಗಿರುವುದರಿಂದಲೇ ಈ ಕುತೂಹಲ. ಆತ ವೈಜ್ಞಾನಿಕವಾಗಿ ಸಾಗುವ ಪರಿಗೆ ಮೂರು ಉದಾಹರಣೆಗಳು :

* ಈಗ ಪ್ರೌಢಶಾಲೆಯ ಕೊನೆಯ ತರಗತಿಯಲ್ಲಿ ಅಧ್ಯಯನ ಮಾಡುತ್ತಿರುವ ನನ್ನ ಮಗನ ಭವಿಷ್ಯ ತಿಳಿಯಬೇಕೆಂಬ ಬಯಕೆ ನನಗುಂಟು. ಇದನ್ನು ಸಾಧಿಸಲು ನಾನು ಅನುಸರಿಸಬಹುದಾದ ವೈಜ್ಞಾನಿಕ ಪಥ ಸ್ಥೂಲವಾಗಿ ಹೀಗಿದೆ :

ಇಲ್ಲಿಯುತನಕ ಆತ ಏರಿಬಂದ ಮಜಲುಗಳನ್ನು ತೀಕ್ಷ್ಣ ಜ್ಞೇಯನಿಷ್ಠ ಪರಾಮರ್ಶೆಗೆ ಒಡ್ಡುತ್ತೇನೆ. ಆತನ ಜೊತೆ ಆತ್ಮೀಯವಾಗಿಯೂ ಸಾವಧಾನ ವಾಗಿಯೂ ಮಾತುಕತೆ ನಡೆಸಿ ಆತನ ಮಾನಸಿಕ ಸಂರಚನೆ ಅರಿಯಲು ಪ್ರಯ ತ್ನಿಸುತ್ತೇನೆ. ಅಲ್ಲದೆ ಆತನ ನಿಕಟ ಉಪಾಧ್ಯಾಯರನ್ನೂ ಆಪ್ತ ಮಿತ್ರರನ್ನೂ ಸಂಧಿಸಿ ಆತನ ಆಸಕ್ತಿ–ನಿರಾಸಕ್ತಿ, ಇಷ್ಟ–ಅನಿಷ್ಟ, ಸಾಮರ್ಥ್ಯ–ದೌರ್ಬಲ್ಯ ಮುಂತಾದವನ್ನು ಅಳೆಯುತ್ತೇನೆ. ಈ ಎಲ್ಲ ಮಾಹಿತಿಗಳನ್ನೂ ಆಧರಿಸಿ ನನ್ನ ಮಗನ ವ್ಯಕ್ತಿತ್ವ ಕುರಿತ ಅಮೂರ್ತ ಚಿತ್ರ ರೂಪಿಸಿ ಇದರ ಅನುಸಾರ ಆತನ ಭವಿಷ್ಯಸಾಧ್ಯತೆಗಳನ್ನು ಊಹಿಸುತ್ತೇನೆ.

ಭೂತದಿಂದ ಒದಗಿದ ಸಂಗತಿಗಳಿಗೆ ವರ್ತಮಾನದಲ್ಲಿ ಆಕೃತಿ ನೀಡಿ ಭವಿಷ್ಯದತ್ತ ಜಿಗಿಯಲು ಮಾಡುವ ವೈಜ್ಞಾನಿಕ ಪ್ರಯತ್ನವಿದು — ಪುತ್ರ ವ್ಯಾಮೋಹಜನ್ಯ ಮಾನಸಿಕ ವಿಕೃತಿ ಅಲ್ಲ. ಇಂಥ ಪ್ರಯತ್ನ ಯಶಸ್ವಿ ಆಗಿಯೇ ಆಗುವುದೆಂಬ ಭರವಸೆಯನ್ನು ಯಾರೂ ಕೊಡಲಾರರು. ಅತ್ಯಂತ ಆಧುನಿಕ ಪರಿಪೂರ್ಣ ಗಣಕವೂ ಇಲ್ಲಿ ಇದಮಿತ್ಥಂ ಪರಿಹಾರ ನೀಡದು. ಏಕೆಂ ದರೆ ನಮ್ಮ ಸರ್ವಂಕಷ ತೀಕ್ಷ್ಣ ಊಹೆಗಳಿಗೂ ನಿಲುಕದ ಅಸಂಖ್ಯ ಇತರ ಕಾರಕಗಳು ಭವಿಷ್ಯದಲ್ಲಿ ಹಣುಕಿ ಎಲ್ಲ ಗಣನೆ ತರ್ಕಗಳನ್ನೂ ತಲೆಕೆಳಗು ಮಾಡುವ ಸಂಭಾವ್ಯತೆ ಇದ್ದೇ ಇದೆ. ವ್ಯಕ್ತಿಪಥವೇ ಆಗಲಿ ರಾಷ್ಟ್ರಗತಿಯೇ ಆಗಲಿ ಅಗೋಚರ ಭವಿಷ್ಯದಲ್ಲಿ ಅಜ್ಞಾತ ಕಾರಕಗಳಿಂದ, ಅಕಸ್ಮಾತ್ತಾಗಿ ಪ್ರಭಾವಗೊಂಡು ಬೇರೆಯೇ ಹಾದಿ ಹಿಡಿಯುವುದು ವಿರಳವೇನೂ ಅಲ್ಲ. ಆದರೆ ವರ್ತಮಾನ ಮುಂಚಿಕೆಯಲ್ಲಿ ದೃಢವಾಗಿ ನೆಲೆಯೂರಿ, ಹಿನ್ನೋಟ ಒದಗಿಸುವ ಅನುಕೂಲತೆಯಿಂದ, ನಡೆದುಬಂದ ಹಾದಿಯನ್ನು ಗಮನಿಸಿ, ಪಥವಿಚಲನೆಯ ಕಾರಣಗಳನ್ನು ಪತ್ತೆಹಚ್ಚಬಹುದು, ಮತ್ತು ಈ ನೂತನ ಮಾಹಿತಿಯ ಅನುಸಾರ ಮುಂದಿನ ಹಾದಿ ಅರಸಲು ಹೊಸ ತಂತ್ರ ರೂಪಿಸಬಹುದು.

ಇಲ್ಲಿಯ ವೈಫಲ್ಯ ವ್ಯಕ್ತಿಯ ಮಿತಿಯನ್ನು ಎತ್ತಿ ತೋರಿಸುವುದೇ ಹೊರತು ವೈಜ್ಞಾನಿಕ ವಿಧಾನದ ದೌರ್ಬಲ್ಯವನ್ನಲ್ಲ.

** ನನ್ನ ಈ ನೂತನ ಉದ್ಯಮದ ಭವಿಷ್ಯ ಹೇಗಿರಬಹುದು ?

ಈ ಪ್ರಶ್ನೆ ಕುರಿತಂತೆ 'ಭವಿಷ್ಯವಾಚನ' ಗೈಯಲು ನಾನು ಪರಿಶೀಲಿಸು ವುದು ಮುಖ್ಯವಾಗಿ ಎರಡು ಅಂಶಗಳನ್ನು : ಮಾರುಕಟ್ಟೆಯ ಸ್ಥಿತಿಗತಿಗಳು,

ಹಣಕಾಸಿನ ಸೌಕರ್ಯ, ಕಚ್ಚಾವಸ್ತುಗಳ ಪೂರೈಕೆ, ವಿದ್ಯುತ್ಸರಬರಾಜಿನ ವಿಶ್ವಾಸಾರ್ಹತೆ, ಕಾರ್ಮಿಕರ ದುಡಿಮೆಯ ದಕ್ಷತೆ ಮುಂತಾದ ನನ್ನ-ಹೊರಗಿನ ಕಾರಕಗಳ ಸಮುಚ್ಚಯ ; ನನ್ನ ಸಾಹಸ ಪ್ರಜ್ಞೆ, ತಂತ್ರವಿದ್ಯಾತ್ಮಕ ಕೌಶಲ, ಧೃತಿ ಮುಂತಾದ ನನ್ನ-ಒಳಗಿನ ಕಾರಕಗಳ ಸಮುಚ್ಚಯ. ಇವನ್ನು ಜ್ಞೇಯ ನಿಷ್ಠವಾಗಿ ಅಭ್ಯಸಿಸಿ ಯುಕ್ತ ತೀರ್ಮಾನ ತಳೆಯಬೇಕು.

ನಮ್ಮ ರಾಷ್ಟ್ರದ ಪಂಚವಾರ್ಷಿಕ ಯೋಜನೆಗಳು, ವಾರ್ಷಿಕವಾಗಿ ಮಂಡಿಸಲಾಗುವ ಹಣಕಾಸಿನ ಮುಂಗಡ ಪತ್ರಗಳು, ಯಾವುದೇ ಬೃಹದ್ಯಂತ್ರ ಸ್ಥಾವರ ಪ್ರಾರಂಭಿಸುವ ಮೊದಲು ತಯಾರಿಸುವ ಯೋಜನಾಲೇಖ್ಯ ಮುಂತಾದವುಗಳ ತಳದಲ್ಲಿರುವುದು ಈ ತೆರನಾದ ವೈಜ್ಞಾನಿಕ ಚಿಂತನೆ : ಏನು ಇದೆ, ಏನು ಆಗಬೇಕಾಗಿದೆ — ಇವೆರಡರ ನಡುವಿನ ಸೇತುವೆ ನಿರ್ಮಾಣಕ್ರಿಯೆ. ಈ ವೈಜ್ಞಾನಿಕ ಪ್ರಕ್ರಿಯೆಯಲ್ಲಿ ಗ್ರಹನಕ್ಷತ್ರಗಳಿಗೆ ಪ್ರವೇಶವಿಲ್ಲ, ಫಲ ಜ್ಯೋತಿಷಿಗಳಿಗೆ ಮೂಗು ತೂರಿ ಸೀನಲು ಅವಕಾಶವಿಲ್ಲ ! ಮಾನವಪ್ರಪಂಚ ದಲ್ಲಿಯ ವ್ಯವಹಾರಗಳನ್ನು ಅರ್ಥವಿಸಿ ಅಂದಾಜಿಸಲು ಅಮಾನವೀಯ ಬಲ ಗಳತ್ತ ಊಹೆಯನ್ನು ವಿಸ್ತರಿಸುವುದು ಅನಾವಶ್ಯಕ.

ಹೀಗೆ ವೈಜ್ಞಾನಿಕವಾಗಿ ಸಿದ್ಧಪಡಿಸಿದ ಮುಂಗಡ ಪತ್ರಗಳೂ ಯೋಜನೆ ಗಳೂ ನಿರೀಕ್ಷಿತ ಮಾರ್ಗಗಾಮಿಗಳಾಗದಿರಬಹುದು, ಉದ್ದಿಷ್ಟ ಗುರಿ ತಲಪ ದಿರಬಹುದು. ಆಗ ನಾವು ಅನುಸರಿಸಬೇಕಾದ ಪಥ ಒಂದೇ : ನಿರೀಕ್ಷೆಗೂ ವಾಸ್ತವತೆಗೂ ನಡುವೆ ಕಮರಿ ಬಾಯಿ ಕಳೆದುದೇಕೆಂಬ ಕಾರಣದ ಶೋಧನೆ, ಮತ್ತು ಈ ಅನುಭವದಿಂದ ಮುಂದಿನ ಸುಧಾರಿತ ಮಾರ್ಗದ ನಿರ್ಧರಣೆ.

*** ಬೆಂಗಳೂರು ವಿಮಾನ ನಿಲ್ದಾಣ. ಸಂಜೆ ೫ ಗಂಟೆ ಸಮೀಪಿಸುತ್ತಿದೆ. ತಮ್ಮ ಬಂಧು ಬಾಂಧವರನ್ನೂ ಇಷ್ಟ ಮಿತ್ರರನ್ನೂ ಸ್ವಾಗತಿಸಲು ಜನಸ್ತೋಮ ಜಮಾಯಿಸಿದೆ. ಇವರೆಲ್ಲರ ಶುಭ ಕಾಮನೆಗಳು ಮತ್ತು ಆಸೆ ಆಕಾಂಕ್ಷೆಗಳು ಮೈವಡೆದಂತೆ ವಿಮಾನ ನಿರೀಕ್ಷಿತ ಕ್ಷಣದಲ್ಲಿ ಧರಾಗಾಮಿಯಾಗಲು ಸಿದ್ಧವಾಗು ತ್ತಿರುವುದು ಕೇಳುತ್ತಿದೆ, ಕಾಣುತ್ತಿದೆ ಕೂಡ. ಆದರೆ ಮುಂದಿನ ಕ್ಷಣಾರ್ಧದಲ್ಲಿ ಎಲ್ಲವೂ ಘೋರ ಅಗ್ನಿದುರಂತದಲ್ಲಿ ಪರ್ಯವಸಾನ. ಆ ಆಧುನಿಕ ಸ್ವಯಂಚಲಿ ವಿಮಾನ ಎಲ್ಲೋ ಹತೋಟಿ ತಪ್ಪಿ ಉಲ್ಕೆಯಂತೆ ನೇರ ನೆಲಕ್ಕೆ ಬಡಿದು ಬೆಂಕಿ ಪ್ರಜ್ವಲಿಸಿ ಅಪಾರ ಜನ ಧನ ನಷ್ಟಕ್ಕೆ ಕಾರಣವಾಗಿದೆ. ಮುಂದೆ ನಡೆಸಿದ ವೈಜ್ಞಾನಿಕ ತಪಾಸಣೆಯಲ್ಲಿ ಕಾರಣವೇನೋ ಗೊತ್ತಾಯಿತು : ಯಂತ್ರ-ವ್ಯಕ್ತಿ

(ಅಂದರೆ ವಿಮಾನ ಮತ್ತು ಅದರ ಚಾಲಕ ಸಮೂಹ) ಅಂತರಕ್ರಿಯೆಯಲ್ಲಿ ಹಣುಕಿದ ದೋಷ. ಆದರೆ ಭೂತಕ್ಕೆ ಹಿಂತಿರುಗಿ ಇದನ್ನು (ದೋಷ) ನಿವಾರಿಸಿ ಅಪಘಾತ ತಪ್ಪಿಸುವುದು ಅಸಾಧ್ಯ. ಭವಿಷ್ಯದಲ್ಲಿ ಇಂಥ ದೋಷ ತಲೆಹಾಕದಂತೆ ಎಚ್ಚರಿಕೆ ವಹಿಸಬಹುದು, ಮಾತ್ರ.

ಮುದ್ರಣ ಕಾರ್ಯದಲ್ಲಿ ದೋಷಗಳು ಎಷ್ಟು ನವುರಾಗಿ ನುಸುಳುವುವು ಎಂಬುದನ್ನು ಗಮನಿಸಿರುವ ಪ್ರತಿಯೊಬ್ಬ ಲೇಖಕನಿಗೂ ವಾಚಕನಿಗೂ ಹೇಗೆ ಭವಿಷ್ಯ ನಮಗೆ 'ಮೋಸ' ಮಾಡುತ್ತದೆ ಎಂಬುದು ಅರ್ಥವಾಗುತ್ತದೆ. ಇದನ್ನು ವಿವರಿಸಲಾಗದಾಗ ಮತ್ತು ನಮ್ಮ ಅದಕ್ಷತೆಯನ್ನು ಅಂಗೀಕರಿಸುವ ವಿವೇಕವಿರದಾಗ "ವಿಧಿಯ ಕೈವಾಡ" ಎಂದು ಹೇಳಿ ತೃಪ್ತಿ ತಳೆಯುತ್ತೇವೆ ! ವಿಧಿ ಎದುರು ಕಾದು ಗೆದ್ದವರುಂಟೇ ? ವಿಧಿ ನಮ್ಮ ಹತಾಶೆಯ ಪ್ರತೀಕವಾಗಬೇಕಾಗಿಲ್ಲ, ನಮ್ಮ ಕಾರ್ಯೋತ್ಸಾಹದ ಮಾನಕವಾಗಬೇಕು.

ಒಂದೊಂದು ಆಕಸ್ಮಿಕವೂ — ಅನುಕೂಲವಾದುದೇ ಆಗಿರಲಿ ಪ್ರತಿಕೂಲವಾದುದೇ ಆಗಿರಲಿ—ನಮಗೆ ನೀಡುವ ಸಂದೇಶವೇನು ? ಪರಿಪೂರ್ಣ ಭವಿಷ್ಯವಾಚನ ಅಸಾಧ್ಯ; ಪರಿಪೂರ್ಣತೆಯೆಡೆಗೆ ಸಾಗಬಲ್ಲ ಅಥವಾ ಕೊಂಡೊಯ್ಯಬಲ್ಲ ಏಕೈಕ ವಿಶ್ವಾಸಾರ್ಹ ಮಾರ್ಗ ವೈಜ್ಞಾನಿಕ ವಿಧಾನ ಮಾತ್ರ.

ಇಲ್ಲಿಯ ತನಕದ ವಿವರಣೆಯನ್ನು ಪ್ರತೀಕಾತ್ಮಕವಾಗಿ ಸೂಚಿಸಬಹುದು:




[ದಕ್ಷತೆ] = [ಪ್ರದಾನ] ÷ [ಆದಾನ]

ಚಿತ್ರ ೨. ಆದಾನ (input) ಮತ್ತು ಪ್ರದಾನ (output) ಸಂಬಂಧವನ್ನೂ ವ್ಯವಸ್ಥೆಯ ದಕ್ಷತೆಯನ್ನೂ ಪ್ರತೀಕಾತ್ಮಕವಾಗಿ ಸೂಚಿಸುವ ಚಿತ್ರ. ಉದಾಹರಣೆಗೆ ಬತ್ತದ ಬೇಸಾಯ. ಇಲ್ಲಿ ಆದಾನವೆಂದರೆ ವ್ಯಕ್ತಿ ಗದ್ದೆಗೆ ಹೂಡುವ ಎಲ್ಲ ಸರಕು ಸೇವೆಗಳ ಮೊತ್ತ; ವ್ಯವಸ್ಥೆಯೆಂದರೆ ಈ ಕೃಷಿವಿಧಾನ. ಪ್ರದಾನವೆಂದರೆ ಈ ಬೇಸಾಯದಿಂದ ದೊರೆಯುವ ಸಮಸ್ತ ಉತ್ಪನ್ನಗಳ ಮೊತ್ತ. ದಕ್ಷತೆ (efficiency) ಬಗ್ಗೆ ವಿವರಣೆ ಮುಂದಿನ ಪುಟದಲ್ಲಿದೆ.

ಕಾರ್ಯ-ಕಾರಣ ಸಂಬಂಧ ಅನ್ವೇಷಿಸುವ ದಿಶೆಯಲ್ಲಿ ಯೋಚಿಸಬಲ್ಲ ಮಾನವಮತಿಯನ್ನು, ಅಂತೆಯೇ ನಿರ್ದಿಷ್ಟ ಉದ್ದೇಶ ಸಿದ್ಧಿಸುವ ಸಲುವಾಗಿ ಕಟ್ಟಿರುವ ಯಂತ್ರಸ್ಥಾವರವನ್ನು 'ವ್ಯವಸ್ಥೆ' ಎನ್ನುತ್ತೇವೆ. ಇದಕ್ಕೆ ನಾವು ಊಡುವ ಮಾಹಿತಿಗಳ ಸಮುದಾಯ 'ಆದಾನ.' ಇದು ನಮಗೆ ಕೊಡುವ ಉತ್ಪನ್ನ 'ಪ್ರದಾನ.' ಅಂದರೆ ಆದಾನವನ್ನು ವ್ಯವಸ್ಥೆ ತನ್ನ ಆಲೇಖ್ಯ ಹಾಗೂ ಸಾಮರ್ಥ್ಯಾನುಸಾರ ಪರಿಗ್ರಹಿಸಿ, ವಿಶ್ಲೇಷಿಸಿ, ಅರ್ಥವಿಸಿ, ಸಂಶ್ಲೇಷಿಸಿ ಪ್ರದಾನವನ್ನು ನೀಡುತ್ತದೆ. 'ಪ್ರದಾನ' ಮತ್ತು 'ಆದಾನ' ಇವುಗಳ ನಿಷ್ಪತ್ತಿಗೆ ವ್ಯವಸ್ಥೆಯ 'ದಕ್ಷತೆ' ಎಂದು ಹೆಸರು :

ದಕ್ಷತೆ ಸದಾ ಭಿನ್ನರಾಶಿ (0 ಮತ್ತು ೧ರ ನಡುವಿನ ಯಾವುದೇ ಸಂಖ್ಯೆ) ಆಗಿರುವುದು ನಿಸರ್ಗನಿಯಮ. ಅಂದರೆ ಬದುಕಿನಲ್ಲಾಗಲೀ ಯಂತ್ರದಲ್ಲಾಗಲೀ ನೀವು ಎಂದೂ ಕೊಟ್ಟಿದ್ದಕ್ಕಿಂತ ಹೆಚ್ಚನ್ನು ಪಡೆಯಲಾರಿರಿ. ವೈಜ್ಞಾನಿಕ ಭವಿಷ್ಯವಾಚನ ಕುರಿತಂತೆ ಕೂಡ ಇದು ನಿಜ.

## 'ವಿಜ್ಞಾನದ ವೈಫಲ್ಯ'

ವೈಜ್ಞಾನಿಕ ವಿಧಾನದಿಂದ ವ್ಯಕ್ತಿಯ ಹಾಗಿರಲಿ, ಸಾಕ್ಷಾತ್ ವಿಜ್ಞಾನದ ಭವಿಷ್ಯವನ್ನೇ ಕರಾರುವಾಕ್ಕಾಗಿ ಕಣಿ ನುಡಿಯುವುದು ಅಸಾಧ್ಯ.

* ವಿಲಿಯಮ್ ಹಾರ್ವೇ (೧೫೭೮-೧೬೫೭) ರಕ್ತಪರಿಚಲನ ವ್ಯವಸ್ಥೆಯನ್ನು — ಅಂದರೆ, ದೇಹದೊಳಗೆ ಹೃದಯದಿಂದ ರೇಚಿಸಲ್ಪಟ್ಟ 'ಶುದ್ಧ' ರಕ್ತ ಹೇಗೆ ಅಂಗೋಪಾಂಗಗಳ ಮೂಲಕ ಹರಿದು ಹೃದಯಕ್ಕೆ 'ಮಲಿನ' ರಕ್ತವಾಗಿ ಮರಳಿ ಮುಂದಿನ ಪಾಳಿಗೆ ಸಿದ್ಧವಾಗುವುದೆಂಬ ಸಂಗತಿಯನ್ನು — ವಿವರಿಸುವ ತನಕ ಇದೊಂದು ಅಜ್ಞಾತ ನಿಗೂಢ ವಿಷಯವಾಗಿತ್ತು.

* ಹೆನ್ರಿ ಬೆಕ್ಕೆರಲ್ (೧೮೫೨-೧೯೦೮) ವಿಕಿರಣಪಟುತ್ವವನ್ನು—ಅಂದರೆ, ಬಾಹ್ಯಪ್ರೇರಣೆ ಅಥವಾ ಪ್ರಭಾವ ಇರದೆಯೂ ವಸ್ತು ತಂತಾನೇ ಶಕ್ತಿಕಣಗಳನ್ನು ಬೀರುವ ವಿಚಿತ್ರ ವಿದ್ಯಮಾನ—ಆವಿಷ್ಕರಿಸುವ ತನಕ ಇಂಥ ಒಂದು ಸನ್ನಿವೇಶ ಎದುರಾದೀತು ಎಂಬ ಕಲ್ಪನೆ ಕೂಡ ವಿಜ್ಞಾನಿಗಳಿಗೆ ಸ್ಫುರಿಸಿರಲಿಲ್ಲ.

* ಮಂಗನ ಮರಿ ಮಂಗನೇ ಏಕೆ ? ಕೋಳಿ ಏಕಲ್ಲ ? ಮನುಷ್ಯನ ಹೊಟ್ಟೆಯಿಂದ ಮನುಷ್ಯನೇ ಹುಟ್ಟುವುದು ಏಕೆ ? ಹುಲಿ ಹುಟ್ಟುವುದಿಲ್ಲ

ಏಕೆ ? ಭ್ರೂಣವಿಜ್ಞಾನ, ತಳಿವಿಜ್ಞಾನ, ಆನುವಂಶಿಕತೆ ಮುಂತಾದ ವಿಜ್ಞಾನ ಪ್ರಕಾರಗಳು ರಂಗಪ್ರವೇಶಿಸುವ ತನಕ (ಇಪ್ಪತ್ತನೆಯ ಶತಮಾನದ ಉತ್ತರಾರ್ಧ) ಈ ಪ್ರಶ್ನೆಗಳಿಗೆ ಖಚಿತ ಉತ್ತರಗಳಿರಲಿಲ್ಲ.

ಅರ್ಥವೇನು ? ನಿಸರ್ಗ ಅಸಂಖ್ಯ ನಿಗೂಢಗಳ ಖನಿ. ಅದರ ಶಿಸ್ತಿಗೆ ಬದ್ಧನಾಗಿ ಮಾನವ ಅದನ್ನು ಅನ್ವೇಷಿಸಲು ಅದು ವಿಧಿಸುವ ಅಥವಾ ಅಪೇಕ್ಷಿಸುವ ಮಾರ್ಗದಲ್ಲಿ ವ್ಯವಸ್ಥಿತವಾಗಿ ಮುನ್ನಡೆದದ್ದಾದರೆ ಆಗ ಅದು ತೀರ ಕೃಪಣತೆಯಿಂದ ತನ್ನ ಒಂದೋ ಎರಡೋ ಗುಟ್ಟುಗಳನ್ನು ಬಿಟ್ಟುಕೊಡಬಹುದು. ಇಂಥ ಯಾವುದೇ ಅನ್ವೇಷಣೆ ಏನೋ ಒಂದು ಗುರಿ ತಲಪಲು ಹಲವು ಶತಮಾನಗಳೇ ಬೇಕಾಗಬಹುದು. ಆದರೆ ನಿಸರ್ಗವೆಂದೂ ಮಾನವನ ಜೊತೆ ಕಪಟ ದ್ಯೂತವಾಡದು : ಅಂದರೆ ಮಾನವನನ್ನು ವಂಚಿಸುವುದಾಗಲಿ ಪ್ರೋತ್ಸಾಹಿಸುವುದಾಗಲಿ ಎಂದೂ ಅದರ ಉದ್ದೇಶವಲ್ಲ. ವಾಸ್ತವವಾಗಿ ನಿಸರ್ಗಕ್ಕೆ ಮನಸ್ಸಿಲ್ಲ, ಭಾವೋದ್ರೇಕವಿಲ್ಲ. ಗುರಿ ಇದೆಯೋ ಇಲ್ಲವೊ ಗೊತ್ತಿಲ್ಲ, ಆದರೆ ನಡೆ ಇದ್ದೇ ಇದೆ. ಹರಿಯುವ ನೀರಿಗೆ ಅದರಲ್ಲಿ ಈಸುವವನ ಗೊಡವೆ ಉಂಟೇ ? ದಂಡೆಯಲ್ಲಿ ನಿಂತವನ ಪರಿವೆ ಉಂಟೇ ?

ಹೀಗೇಕೆ ? ನಿಸರ್ಗದ ಸೂಕ್ಷ್ಮಾತಿಸೂಕ್ಷ್ಮಾಂಶ ಮಾನವ. ಕಾಲದೇಶಗಳಲ್ಲಿ ಈತನ ಅಸ್ತಿತ್ವ ಅತ್ಯಲ್ಪ. ಇಂದಲ್ಲ, ಇನ್ನು ಹಲವು ಕೋಟಿ ವರ್ಷಗಳ ತರುವಾಯವೂ ಪರಿಸ್ಥಿತಿ ಹೀಗೆಯೇ ಇರುವುದು. ಸಾಂತವೆಂದೂ ಅನಂತವನ್ನು ಅಳೆದು ಪೂರೈಸದು. (ಇಲ್ಲಿ ಮಾನವ ಸಾಂತ, ನಿಸರ್ಗ ಅನಂತ.) ಮಾನವನ ವರ್ತಮಾನ ಜ್ಞಾನವಿಜ್ಞಾನ ಸಮುಚ್ಚಯ ಆತನ ದೃಷ್ಟಿಯಿಂದ ಅತ್ಯಗಾಧ ಮತ್ತು ಪರಮಗಹನ ಇರಬಹುದು. ಆದರೆ ಇವಾವುವೂ ನಿಸರ್ಗ ರಹಸ್ಯಗಳ ಕಿಂಚಿದಂಶವನ್ನೂ ಪರಿಪೂರ್ಣವಾಗಿ ವ್ಯಾಖ್ಯಾನಿಸಲಾರವು.

ಆದ್ದರಿಂದ ಭವಿಷ್ಯವನ್ನು ನಿರ್ದಿಷ್ಟವಾಗಿ ಮುನ್ನುಡಿಯುವಲ್ಲಿ ವೈಜ್ಞಾನಿಕ ವಿಧಾನ ಯಶಸ್ವಿ ಆಗದಿರುವುದು ಮಾನವನ ಅಪರಿಪೂರ್ಣತೆಗೂ ನಿಸರ್ಗದ ಅಗಾಧತೆಗೂ ಸಾಕ್ಷಿಯೇ ವಿನಾ ವಿಜ್ಞಾನದ ವೈಫಲ್ಯಕ್ಕೆ ನಿದರ್ಶನವಲ್ಲ. ವಿಜ್ಞಾನದ ಎಲ್ಲ ಪ್ರಾಮಾಣಿಕ ಹಾಗೂ ವಿನೀತ ವಿದ್ಯಾರ್ಥಿಗಳಿಗೆ ಗೊತ್ತಿರುವ ಸಂಗತಿ ಇದು.

"ವೈಜ್ಞಾನಿಕ ಸಿದ್ಧಾಂತಿಯನ್ನು ಅಸೂಯೆಯಿಂದ ನೋಡಬಾರದು. ಏಕೆಂದರೆ ನಿಸರ್ಗ, ಇನ್ನಷ್ಟು ಸೂಕ್ಷ್ಮವಾಗಿ ಹೇಳುವುದಾದರೆ ಪ್ರಯೋಗ,

ಆತನ ಕಾರ್ಯ ಕುರಿತಂತೆ ದಯಾಶೂನ್ಯವಾದ ಮತ್ತು ಅಷ್ಟೇನೂ ಸ್ನೇಹಪರವಲ್ಲದ ನಿಕಷ. ಅದು ಎಂದೂ ಒಂದು ಸಿದ್ಧಾಂತವನ್ನು ಸರಿ ಎಂದೊಪ್ಪದು. ಅತ್ಯಂತ ಅನುಕೂಲ ಸಂದರ್ಭಗಳಲ್ಲಿ 'ಇರಬಹುದು' ಎನ್ನುತ್ತದೆ ; ಹೆಚ್ಚಿನ ಎಲ್ಲ ಸಂದರ್ಭಗಳಲ್ಲಿ ನೇರವಾಗಿ 'ಇಲ್ಲ' ಎಂದುಬಿಡುತ್ತದೆ. ಯಾವುದೇ ಒಂದು ಪ್ರಯೋಗ ಸಿದ್ಧಾಂತದ ಜೊತೆ ಹೊಂದಿಕೆಗೊಂಡರೆ ಸಿದ್ಧಾಂತ ಕುರಿತಂತೆ ಇದರ ಅರ್ಥ 'ಇರಬಹುದು,' ಹೊಂದಿಕೆಗೊಳ್ಳದಿದ್ದರೆ 'ಇಲ್ಲ.' ಪ್ರತಿಯೊಂದು ಸಿದ್ಧಾಂತವೂ ಒಂದಲ್ಲ ಒಂದು ದಿವಸ ಅದರ 'ಇಲ್ಲ'ವನ್ನು ಅನುಭವಿಸಲಿದೆ—ಹೆಚ್ಚಿನ ಸಿದ್ಧಾಂತಗಳು ಧಾರಣೆಯಾದ ತರುಣದಲ್ಲೇ." ಐನ್‌ಸ್ಟೈನ್ ಬರೆದ ಮಾತುಗಳಿವು.

## ವಿಜ್ಞಾನ, ವೈಜ್ಞಾನಿಕ ವಿಧಾನ

ನಿಸರ್ಗದ ವಿವಿಧ ವಿದ್ಯಮಾನಗಳನ್ನು ಚಿಕಿತ್ಸಕವಾಗಿ ಗಮನಿಸುವ ವ್ಯಕ್ತಿ ಅವುಗಳ ಹಿನ್ನೆಲೆಯಲ್ಲಿರುವ ಕಾರಣಗಳನ್ನು ಅನ್ವೇಷಿಸಲು ಮುಂದಾಗುತ್ತಾನೆ. ಇದರಲ್ಲಿ ಆತ ಯಶಸ್ಸು ಗಳಿಸಿದಾಗ ನಿಸರ್ಗದ ಒಂದು ರಹಸ್ಯ ಆತನಿಗೆ ಸಿದ್ಧಿಸುತ್ತದೆ—ಉದಾಹರಣೆಗೆ, ಬೀಜ ಮೊಳೆತು ಚಿಗುರಿ ಗಿಡ ಅರಳಿ ಮರವಾಗಿ ಹೂಬಿಟ್ಟು ಕಾಯಿ ಹಿಡಿದು ಹಣ್ಣು ಬಲಿತು ಮತ್ತೆ ಬೀಜ ದೊರೆಯುತ್ತದೆ ಎಂಬ ಚಕ್ರದ ಕಾರಣ ತಿಳಿದಾಗ. ಈ ಅರಿವೇ ವಿಜ್ಞಾನ. ಸಹಜವಾಗಿಯೇ ವಿಜ್ಞಾನ ನಿರಂತರ ಕ್ವಥನದಲ್ಲಿರುವ ಜ್ಞಾನಪ್ರಕಾರ, ಸ್ಥಗಿತ ನಿರ್ಜೀವ ವಸ್ತುವಲ್ಲ.

ಮಾನವಮತಿ–ನಿಸರ್ಗ ನಡುವಿನ ಅಂತರಕ್ರಿಯೆಯ ಶಿಶುವೇ ವಿಜ್ಞಾನ. ಇದರ ನಿರ್ಮಾಪಕ ಸ್ವತಃ ಮಾನವನೇ ಆದರೂ ಇದು ಮಾತ್ರ ಪೂರ್ತಿ ಜ್ಞೇಯನಿಷ್ಠ ಚಿಂತನಪ್ರಕಾರ—ವ್ಯಕ್ತಿಯನ್ನು ಅವಲಂಬಿಸದ ನಿರಪೇಕ್ಷ ಜ್ಞಾನ. ಎಂದೇ ವಿಜ್ಞಾನದ ಸಾರ್ವತ್ರಿಕತೆ ಮತ್ತು ಸರ್ವಮಾನ್ಯತೆ. ನೀರಿನ ಅಣುವನ್ನು ಛೇದಿಸಿದಾಗ/ವಿಭಜಿಸಿದಾಗ ಹೈಡ್ರೊಜನ್ನಿನ ಎರಡು ಪರಮಾಣುಗಳೂ ಆಕ್ಸಿಜನ್ನಿನ ಒಂದು ಪರಮಾಣುವೂ ದೊರೆಯುತ್ತವೆ. ಈ ಸಂಶೋಧನೆ ಮಾಡಿದಾತ ವ್ಯಕ್ತಿಯೇ (ವಿಜ್ಞಾನಿ)ಆದರೂ ಈ ಫಲಿತಾಂಶ ಆ ವ್ಯಕ್ತಿಯನ್ನು ಅವಲಂಬಿಸದ ಅಥವಾ ಮೀರಿರುವ ಸಾರ್ವಕಾಲಿಕ ಮತ್ತು ಸಾರ್ವದೈಶಿಕ ಸತ್ಯ.

ವಿಜ್ಞಾನದ ಶೋಧನೆಗೆ—ನಿಸರ್ಗದ ಜ್ಞೇಯನಿಷ್ಠ ವ್ಯಾಖ್ಯಾನಕ್ಕೆ—ನಾವು ಅನುಸರಿಸುವ ಹಾದಿಯೇ ವೈಜ್ಞಾನಿಕ ವಿಧಾನ. ಇದನ್ನು ಸ್ವತಃ

ವಿಜ್ಞಾನವೇ ನಿರ್ಧರಿಸುತ್ತದೆ. ಅದು ವಿಧಿಸುವ ಪಥದಲ್ಲಿ ನಾವು ನಿರಪೇಕ್ಷವಾಗಿ ಗಮಿಸಿದ್ದಾದರೆ ಅದರ ಕೆಲವು ಸುಳುಹುಗಳಾದರೂ ನಮಗೆ ಹೊಳೆಯಬಹುದು. ಹೀಗಲ್ಲದೆ ನಮಗೆ ಖುಷಿ ಕಂಡ ರೀತಿ ನಡೆದದ್ದಾದರೆ ಅದೆಂದೂ ಒಲಿಯದು. ಆದ್ದರಿಂದ ವೈಜ್ಞಾನಿಕ ವಿಧಾನವಾದರೂ ಪೂರ್ತಿ ಜ್ಞೇಯ ನಿಷ್ಠವೇ.

ವೈಜ್ಞಾನಿಕ ವಿಧಾನದ ಕೆಲವು ಮುಖ್ಯ ಹಂತಗಳಿವು :

* ಸಮಸ್ಯೆಯ ರೂಪಣೆ ಮತ್ತು ನಿರೂಪಣೆ.

* ಸಮಸ್ಯೆಯನ್ನು ಕುರಿತಂತೆ ಸಂಗತವಾಗುವ ಮಾಹಿತಿಗಳ ಸಂಗ್ರಹಣೆ. ಪ್ರಯೋಗ, ವೀಕ್ಷಣೆ ಮುಂತಾದವು ಈ ಹಂತದಲ್ಲಿ ಬರುತ್ತವೆ.

* ಹೀಗೆ ಕಲೆಹಾಕಿದ ಮಾಹಿತಿಗಳನ್ನು ವಿಶ್ಲೇಷಿಸಿ ಇವನ್ನು ಬಾಧಿಸಬಹುದಾದ ಸ್ಥೂಲಪ್ರತಿರೂಪದ ಊಹನೆ. ಈ ಪ್ರತಿರೂಪದ ಬಿಡಿ ನಿದರ್ಶನಗಳಾಗಿ ಮೇಲಿನ ಮಾಹಿತಿಗಳು ಒದಗಿರಬಹುದೇ ಎಂಬ ಅಂದಾಜು.

* ಈ ಪ್ರತಿರೂಪವನ್ನು ಲಭ್ಯ ಮಾಹಿತಿಗಳ ಮುನ್ನೆಲೆಯಲ್ಲಿ ಪರಾಂಬರಿಸಿ, ಸಂಸ್ಕರಿಸಿ ಯುಕ್ತ ಸಾರ್ವತ್ರಿಕ ಸಿದ್ಧಾಂತದ ಮಂಡನೆ. ಆದರೆ ಸಮಸ್ಯೆಗೆ ಈಗ ಸಮರ್ಪಕ ಪರಿಹಾರ ದೊರೆತಂತಾಯಿತು, ಇಷ್ಟೇ ಅಲ್ಲ. ಈ ಸಿದ್ಧಾಂತ ನಮಗೆ ಅಜ್ಞಾತವಲಯಗಳತ್ತ ಸಾಗಲು ನೆರವಾಗುವ ಕೈದೀವಿಗೆಯೂ ಹೌದು.

ಉದಾಹರಣೆಗೆ, ಬೆಳಕಿನ ವೇಗ ಎಷ್ಟು ?

ಇದನ್ನೊಂದು ಪ್ರಾಯೋಗಿಕ ಸಮಸ್ಯೆಯಾಗಿ ಎತ್ತಿಕೊಂಡ ಮೊದಲಿಗ ಗೆಲಿಲಿಯೋ. ಈತನಿಗಿಂತ ಹಿಂದಿನವರು ಬೆಳಕಿನ ವೇಗ ಅನಂತವೆಂದು ಭಾವಿಸಿದ್ದರು. ಇದರ ಅರ್ಥ : ಬೆಳಕು ಆಕರದಿಂದ ಜಿಗಿದ ಕ್ಷಣದಲ್ಲೇ ವಿಶ್ವಾದ್ಯಂತ ವ್ಯಾಪಿಸಿಯೂ ಇರುವುದು. ಆದ್ದರಿಂದ ನಕ್ಷತ್ರಗಳು ನಮ್ಮಿಂದ ಎಷ್ಟೇ ಅಗಾಧ ದೂರಗಳಲ್ಲಿ ಎರಚಿಕೊಂಡಿರಲಿ, ಪ್ರತಿಯೊಂದು ನಕ್ಷತ್ರದ 'ಈಗ' ನಮ್ಮ 'ಈಗ'ವೇ ಆಗಿದೆ. ಅವುಗಳಿಂದ ಹೊರಟ ಬೆಳಕು ನಮ್ಮನ್ನು ತಲಪಲು ಕಾಲಾವಕಾಶ ಬೇಡ.

ಗೆಲಿಲಿಯೋನ ಪ್ರಯೋಗಪರಿಣತ ಹಾಗೂ ಸಿದ್ಧಾಂತನಿಶಿತ ಮತಿ ಈ ಹುಂಬತನವನ್ನು ಒಪ್ಪಲಿಲ್ಲ. ಬೆಳಕಿನ ವೇಗ ಅನಂತವಲ್ಲ, ಸಾಂತ —ಆದರೆ ಬೃಹತ್ಸಂಖ್ಯೆ ಎಂದು ಆತ ಸಕಾರಣವಾಗಿ ತರ್ಕಿಸಿದ. ಆದರೆ ಸಾಧನೆ ?

ಈ ಪ್ರಯೋಗಕ್ಕೆ ಗೆಲಿಲಿಯೋ ಊರ ಹೊರಗಿನ ಎರಡು ದಿಬ್ಬಗಳನ್ನು ಆಯ್ದ. ಅಮಾವಾಸ್ಯೆಯ ಕಾರಿರುಳು. ಒಂದು ದಿಬ್ಬದ ಕೊಡಿಯಲ್ಲಿ ಗೆಲಿಲಿಯೋ, ಇನ್ನೊಂದರ ಕೊಡಿಯಲ್ಲಿ ಶಿಷ್ಯ ನಿಂತರು. ಪೂರ್ವನಿಶ್ಚಿತ ಕ್ಷಣದಲ್ಲಿ (ಆಗ ನಿಖರ ಗಡಿಯಾರಗಳು ಇನ್ನೂ ಬಳಕೆಗೆ ಬಂದಿರಲಿಲ್ಲ) ಗೆಲಿಲಿಯೋ ತನ್ನ ಕಂದೀಲಿನ ಕಿಂಡಿ ತೆರೆದು ಒಡನೆ ಮುಚ್ಚಿದ. ಇದರಿಂದ ಚಿಮ್ಮಿದ ಬೆಳಕು ಶಿಷ್ಯನನ್ನು ತಲಪಿದ ಕ್ಷಣವನ್ನು ಈತ ದಾಖಲಿಸಿದ. ಈ ಪ್ರಯೋಗವನ್ನು ಹಲವಾರು ಸಲ ಪುನರಾವರ್ತಿಸಿದರು.

ಬೆಳಕು ಹೊರಟ ಹಾಗೂ ತಲಪಿದ ಕ್ಷಣಗಳ ನಡುವಿನ ಸರಾಸರಿ ಕಾಲಾವಧಿ ($t$) ಹೀಗೆ ತಿಳಿಯಿತು. ದಿಬ್ಬಗಳ ನಡುವಿನ ಅಂತರ($s$) ಗೊತ್ತಿತ್ತು. ಆದ್ದರಿಂದ (ಪುಟ ೫-೬)

$$\text{ಬೆಳಕಿನ ವೇಗ } (v) = \text{ ಅಂತರ } (s) \div \text{ ಕಾಲಾವಧಿ } (t)$$

$$v = s \div t$$

ಈ ಗಣನೆಯಿಂದ ದೊರೆತ ಉತ್ತರವೇನೋ ಸಾಂತ ಸಂಖ್ಯೆ. ಆದರೆ ಗೆಲಿಲಿಯೋನ ವಿಜ್ಞಾನಪ್ರಜ್ಞೆ ಇದನ್ನು ಒಪ್ಪಲು ನಿರಾಕರಿಸಿತು. ಇಲ್ಲಿ ಏನೋ ಐಬು ನುಸುಳಿರಬೇಕು. ಅದೇನು ?

ಅದೇನೆಂದು ತಿಳಿಯಲು ಮುಂದಿನ ಪೀಳಿಗೆ ವಯಸ್ಸಿಗೆ ಬರುವತನಕ ವಿಜ್ಞಾನ ಕಾದಿರಬೇಕಾಯಿತು.

ಭೂಮಿಯ ಉಪಗ್ರಹ ಚಂದ್ರ. ಸೌರವ್ಯೂಹದಲ್ಲಿ ಇದೊಂದು ಅದ್ವಿತೀಯ ವೈಶಿಷ್ಟ್ಯ—ಅಂದರೆ ಇತರ ಯಾವ ಗ್ರಹಕ್ಕೂ ಇರದ ಹಿರಿಮೆ—ಎಂಬುದಾಗಿ ಮಾನವ ಕ್ಷಮ್ಯ ಅಹಂಭಾವದಿಂದ ಬೀಗುತ್ತಿದ್ದ. ಈ ಕುಪ್ರತಿಷ್ಠೆಗೆ ಮೊದಲ ಕೊಡಲಿ ಏಟು ಹೊಡೆದಾತ ಗೆಲಿಲಿಯೋ. ಈತ ಆಗ ತಾನೇ ರಂಗಪ್ರವೇಶಿಸುತ್ತಿದ್ದ ದೂರದರ್ಶಕದ ಮೂಲಕ ಗುರುಗ್ರಹವನ್ನು ವೀಕ್ಷಿಸಿದ. ಆಶ್ಚರ್ಯ : ಅದನ್ನು ಸುತ್ತುವರಿದುಕೊಂಡು ನಾಲ್ಕು ಚಂದ್ರಗಳಿವೆ ಎಂದು ಗಮನಿಸಿದ !

ಗುರೂಪಗ್ರಹಗಳ ಗತಿವೈವಿಧ್ಯಾನ್ವೇಷಣೆ ಓಲಾಸ್ ರೋಮರ್ (೧೬೪೪-೧೭೧೦)ಎಂಬ ಖಗೋಳವಿಜ್ಞಾನಿಯ ಗೀಳಾಯಿತು. ತತ್ಪೂರ್ವದ ಸಂಶೋಧನೆ ಹಾಗೂ ವೀಕ್ಷಣೆಗಳ ಫಲವಾಗಿ ಭೂಮಿ-ಗುರು ಅಂತರ, ಗುರೂಪ ಗ್ರಹಗಳ ಕಕ್ಷಾವೇಗಗಳು ಮುಂತಾದ ಭೌತಮಾಹಿತಿಗಳೆಲ್ಲವೂ ಈತನಿಗೆ ಲಭ್ಯ

ವಾಗಿದ್ದುವು. ಅಂದ ಮೇಲೆ ಯಾವುದೇ ಉಪಗ್ರಹದ ಗ್ರಹಣಾರಂಭ ಮತ್ತು ಮೋಕ್ಷಕ್ಷಣಗಳನ್ನು ಕರಾರುವಾಕ್ಕಾಗಿ ಗಣಿಸಿ ನಿರ್ಧರಿಸುವುದು ಈತನಿಗೆ ಸುಲಭ ವಾಯಿತು. (ಸೂರ್ಯ-ಗುರು ವಿಸ್ತೃತ ದಿಶೆಯಲ್ಲಿ ಗುರುವಿನ ನೆರಳು ಅಂದರೆ ಛಾಯಶಾಂಕು—ಚಾಚುತ್ತದೆ ; ಉಪಗ್ರಹ ಇದನ್ನು ಪ್ರವೇಶಿಸಿ ದಾಗ ಗ್ರಹಣಾರಂಭ, ಇದರಿಂದ ಪೂರ್ತಿ ನಿರ್ಗಮಿಸಿದಾಗ ಗ್ರಹಣ ಮೋಕ್ಷ ; ಇವುಗಳ ನಡುವಿನ ಕಾಲ ಗ್ರಹಣಾವಧಿ.)

ಹೀಗೆ ರೋಮರ್ ಸೈದ್ಧಾಂತಿಕ ಗಣನೆಯಿಂದ ಸನ್ನದ್ಧನಾಗಿ ಉಪ ಗ್ರಹದ ಗ್ರಹಣಾರಂಭ ಮತ್ತು ಮೋಕ್ಷಕ್ಷಣಗಳನ್ನು ವೀಕ್ಷಿಸಲು ಉದ್ಯುಕ್ತ ನಾದ. ಆದರೆ ಗಣನೆ–ವೀಕ್ಷಣೆ ಹೊಂದಾಣಿಕೆ ಏರ್ಪಡಲಿಲ್ಲ. ಪ್ರತಿಸಲವೂ ಗ್ರಹಣ ತುಸು ತಡವಾಗಿಯೇ ಘಟಿಸುತ್ತಿತ್ತು. ಇದರಲ್ಲಿ ಆತ ಒಂದು ಪ್ರರೂಪ ಗಮನಿಸಿದ :

ಭೂಮಿ ಮತ್ತು ಗುರು ತಮ್ಮ ಕಕ್ಷೆಗಳಲ್ಲಿ ಸೂರ್ಯನನ್ನು ಪರಿಭ್ರಮಿ ಸುತ್ತಿರುವಾಗ ಭೂಮಿ ಕೆಲವು ಸಲ ಗುರು-ಅಭಿಮುಖವಾಗಿಯೂ ಇನ್ನು ಕೆಲವು ಸಲ ಗುರು-ವಿಮುಖವಾಗಿಯೂ ಚಲಿಸುತ್ತಿರುವುದು. ಅಲ್ಲದೇ ಭೂಮಿ-ಗುರು ಅಂತರ ಎರಡು ಮಿತಿಗಳ (ಕನಿಷ್ಠ ಹಾಗೂ ಗರಿಷ್ಠ) ನಡುವೆ ಆಂದೋಲಿಸುತ್ತಿರುವುದು. ಭೂಮಿ ಗುರುವಿನತ್ತ ಸಾಗುತ್ತಿರುವಾಗ(ಭೂಮಿ-ಗುರು ಅಂತರ ಕಡಿಮೆ ಆದಂತೆ) ಗ್ರಹಣಗಳು ಕ್ರಮೇಣ ತ್ವರಿತವಾಗಿಯೂ ಗುರುವಿನಿಂದ ದೂರ ಹೋಗುತ್ತಿರುವಾಗ (ಭೂಮಿ-ಗುರು ಅಂತರ ಹಿರಿದಾ ದಂತೆ) ಗ್ರಹಣಗಳು ಕ್ರಮೇಣ ನಿಧಾನವಾಗಿಯೂ ಗೋಚರಿಸುತ್ತಿದ್ದುವು.

ಗುರು-ಭೂಮಿ ಅಗಾಧ ಅಂತರವನ್ನು ಬೆಳಕು ಈಸಿ ಬಂದು ಅಲ್ಲಿಯ ಸುದ್ದಿಯನ್ನು (ಗ್ರಹಣದ ಸಂದೇಶ) ಇಲ್ಲಿಯ ವೀಕ್ಷಕನಿಗೆ ಒಪ್ಪಿಸುವಲ್ಲಿ ಸಲ್ಲುವ ಕಾಲವೇ ಈ ಗಣನೆ-ವೀಕ್ಷಣೆ ಅಸಾಮರಸ್ಯದ ಕಾರಣವೆಂದು ರೋಮರ್ ತರ್ಕಿಸಿದ. ಅಂದರೆ ಬೆಳಕಿಗೆ, ಗೆಲಿಲಿಯೋ ಭಾವಿಸಿದ್ದಂತೆ (ಇತರರು ಊಹಿಸಿದಂತಲ್ಲ) ಸಾಂತವೇಗವಿದೆ ಎಂದಾಯಿತು ಗೆಲಿಲಿಯೋ ಪ್ರಯೋಗದಲ್ಲಿಯ ದಿಬ್ಬ-ಕಂದೀಲುಗಳು ರೋಮರ್ ವೀಕ್ಷಣೆಯಲ್ಲಿಯ ಗುರೂಪಗ್ರಹ-ಗ್ರಹಣ ಆಗುತ್ತವೆ.

ಪ್ರಯೋಗಲಭ್ಯ ಮಾಹಿತಿ ಅನುಸಾರ ರೋಮರ್ ಬೆಳಕಿನ ವೇಗ ಗಣಿ ಸಿದ. ಸೆಕೆಂಡಿಗೆ ೨೨೭,೦೦೦ ಕಿಮೀ (ಆಧುನಿಕ ನಿಷ್ಕೃಷ್ಟ ಬೆಲೆ ೨೯೯,೭೯೨).

ಗೆಲಿಲಿಯೋ ಸೋತದ್ದು ಎಲ್ಲಿ ? ದಿಬ್ಬಗಳ ನಡುವಿನ ಅಂತರ ಬೆಳಕಿನ ವೇಗಕ್ಕೆ ಹೋಲಿಸುವಾಗ ಅನಂತಾಲ್ಪವಾದದ್ದರಲ್ಲಿ. ಬೆಳಕು ೧ ಸೆಕೆಂಡಿನಲ್ಲಿ ಭೂವಿಂಗೆ ೭ ಸುತ್ತು ಹಾಕಿ ಮುಂಜಿಗಿದಿರುತ್ತದೆ.

## ವೈಜ್ಞಾನಿಕ ಮನೋಧರ್ಮ

ವೈಜ್ಞಾನಿಕ ವಿಧಾನ ಮೂಲತಃ ವಿಜ್ಞಾನದಿಂದ ರೂಪುಗೊಂಡದ್ದು ನಿಜ. ಆದರೆ ಮುಂದೆ ಇದೊಂದು ಸ್ವತಂತ್ರ ಪ್ರಕಾರವಾಗಿ ಹೆಪ್ಪುಗಟ್ಟಿರುವುದನ್ನು ಕಾಣುತ್ತೇವೆ. ಅಂದರೆ, ವೈಜ್ಞಾನಿಕ ವಿಧಾನ ವಿಜ್ಞಾನದ ಸಮಸ್ಯೆಗಳ ಪರಿಹಾರಕ್ಕಾಗಿ ಮಾತ್ರ ಮೀಸಲಾಗಿರುವ ಚಿಂತನಪ್ರಕಾರವಲ್ಲ, ಬದುಕಿನಲ್ಲಿ ಎದುರಾಗುವ ಇತರ ಯಾವುದೇ ಸಮಸ್ಯೆಯ ಪರಿಹಾರಕ್ಕೂ ಇದನ್ನು ಯಶಸ್ವಿಯಾಗಿ ಅನ್ವಯಿಸಬಹುದು. ಉದಾಹರಣೆಗೆ—

* ನನ್ನ ಮಗನ ಮದುವೆ ಮಾಡಬೇಕು, ಹೇಗೆ ? ಮೊದಲು ಯೋಗ್ಯ ಕನ್ಯೆಯ ಆಯ್ಕೆ. ಪರಸ್ಪರ ಸುದರ್ಶನ ಮತ್ತು ಅನುಮೋದನೆ. ಮುಂದೆ ಸರಳ ವಿವಾಹ. ಸುಖಸಂಸಾರ. ನೂತನ ದಂಪತಿಗಳ ಪರಸ್ಪರ ಒಲವೇ ನಿಜವಾದ ಮದುವೆ ಎಂಬ ಸೂಕ್ಷ್ಮ ಸಂಗತಿಯನ್ನು ನಾನು ಗಮನಿಸಿದ್ದೇ ಆದರೆ ಉಳಿದ ಎಲ್ಲ ಸಮಸ್ಯೆಗಳೂ ತಂತಾವೇ ಪರಿಹಾರವಾಗುತ್ತವೆ.

* ರಾಮಜನ್ಮಭೂಮಿ-ಬಾಬರಿ ಮಸೀದಿ ಕಗ್ಗಂಟು. ದೇವರು, ಧರ್ಮ, ಶಾಸ್ತ್ರ, ಗ್ರಂಥ, ವಿಧಿ, ಆಚರಣೆ, ಪರಂಪರೆ ಮುಂತಾದವೆಲ್ಲವೂ ಮಾನವಕೃತ ಕಟ್ಟುಪಾಡುಗಳು ಮತ್ತು ನಂಬಿಕೆಗಳು, ನಿಸರ್ಗಪ್ರಣೀತ ನಿಯಮಗಳಲ್ಲ, ಶಿಸ್ತುಗಳೂ ಅಲ್ಲ. ಪ್ರಾರ್ಥನೆ ಮಾಡದಿದ್ದರೂ ಪೂಜೆ ಸಲ್ಲಿಸದಿದ್ದರೂ ವ್ಯಕ್ತಿ ಬದುಕಿರಬಲ್ಲ (ಚೆನ್ನಾಗಿ ಕೂಡ !), ಆದರೆ ಅನ್ನ ಬಿಟ್ಟರೆ ಅಥವಾ ಉಸಿರು ನಿಲ್ಲಿಸಿದರೆ ಉಳಿಯಲಾರ. ಈಗ, ಮಾನವಕೃತ ಕಟ್ಟುಪಾಡುಗಳು ಮತ್ತು ನಂಬಿಕೆಗಳು, ಮೂಲತಃ, ಸಮಾಜದ ಒಳಿತಿಗಾಗಿ ಇರುವಂಥವು, ನಮ್ಮನ್ನು ಸೃಷ್ಟಿಸಿ ಪ್ರಭಾವಿಸುತ್ತಿರುವ ನಿಸರ್ಗ ಬಲಗಳ ಮೇಲೆ ಇವು ಯಾವ ಪರಿಣಾಮವನ್ನೂ ಬೀರಲಾರವು ಎಂಬ ಮೂಲಭೂತ ಸತ್ಯವನ್ನು ನಾವು ಗ್ರಹಿಸಿ ತದನುಸಾರ ವರ್ತಿಸಲು ಬದ್ಧಕಂಕಣರಾದದ್ದಾದರೆ ಈ ಕಗ್ಗಂಟು ತೀರ ಸುಲಭವಾಗಿ ಬಿಡಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ.

ಖಂಡಿತವಾಗಿಯೂ ರಾಮ ಆಗಲಿ ಮಹಮ್ಮದ್ ಪೈಗಂಬರ್ ಆಗಲಿ

(ನಿಜಕ್ಕೂ ಅವರು ದೇವರ ಅವತಾರಪುರುಷರಾಗಿ ಈ ಧರೆಯ ಮೇಲೆ ಸಾಮಾನ್ಯ ಮನುಷ್ಯರಂತೆ ಬಾಳಿದ್ದೇ ಆಗಿದ್ದರೆ) ತಮ್ಮ ಹೆಸರುಗಳ ನೆಪದಲ್ಲಿ ಜನಸಾಮಾನ್ಯರು ಹೊಡೆದಾಡಿ ಮಡಿಯಬೇಕೆಂದು ಬೋಧಿಸಿರಲಾರರು, ವಿಧಿಸಿರಲೂ ಆರರು.

* ಅಂತೋಣಿ ಡಿ ಮೆಲ್ಲೊ ಎಂಬ ಪಾದ್ರಿ ಮಹಾಶಯರು ಬರೆದಿದ್ದಾರೆ :

ಪ್ರಾಪಂಚಿಕವಾದ ಎಲ್ಲ ಉದ್ದೇಶಗಳನ್ನೂ ವ್ಯವಹಾರಗಳನ್ನೂ ಕುರಿತಂತೆ ತಾನೊಬ್ಬ ನಿರೀಶ್ವರವಾದಿಯೆಂದು ಆತ ಸಾರಿದ್ದ. ತನ್ನೊಬ್ಬನ ಬಗ್ಗೆ ಆತನೇನಾದರೂ ಚಿಂತಿಸಿದ್ದಾಗಿದ್ದರೆ ತನ್ನ ಧರ್ಮ ಬೋಧಿಸಿದುದಾವುದನ್ನೂ ನಂಬುತ್ತಿದ್ದಿರಲಿಲ್ಲ. ದೇವರ ಅಸ್ತಿತ್ವ : ಇದು ಪರಿಹರಿಸಿದ್ದಕ್ಕಿಂತ ಸೃಷ್ಟಿಸಿದ ಸಮಸ್ಯೆಗಳೇ ಅಧಿಕ. ಮರಣೋತ್ತರ ಜೀವನ : ಕೇವಲ ಕಲ್ಪನಾವಿಲಾಸ. ಧರ್ಮಗ್ರಂಥಗಳು ಮತ್ತು ಪರಂಪರೆ ಎಷ್ಟು ಒಳಿತನ್ನು ನೀಡಿದ್ದುವೋ ಅಷ್ಟೇ ಕೆಡುಕನ್ನೂ ಮಾಡಿದ್ದುವು. ವ್ಯಕ್ತಿಜೀವನದ ಏಕಾಂಗಿತ್ವವನ್ನೂ ಉದ್ವಿಗ್ನತೆಯನ್ನೂ ಸಾಂತ್ವನಗೊಳಿಸಲು ಹೂಡಿದ ಉಪಾಯಗಳಿವು.

ಆತನನ್ನು ಹಾಗೆಯೇ ಬಿಡುವುದು ಪರಮಶ್ರೇಯಸ್ಕರವಾಗಿತ್ತು. ಅಭಿವೃದ್ಧಿ ಮತ್ತು ಆತ್ಮ ಸಾಕ್ಷಾತ್ಕಾರ ಹಂತಗಳನ್ನು ಆತ ಏರುತ್ತಿದ್ದ.

ಶಿಷ್ಯ ಒಮ್ಮೆ ಗುರುವಿಗೆ ಪ್ರಶ್ನೆ ಹಾಕಿದ "ಬುದ್ಧ ಯಾವುದು ?'

"ಮನಸ್ಸೇ ಬುದ್ಧ" ಗುರುವಿನ ಉತ್ತರ.

ಇನ್ನೊಂದು ದಿನ ಇದೇ ಪ್ರಶ್ನೆ ಕೇಳಿದಾಗ ಗುರು ಹೇಳಿದ "ಮನಸ್ಸೂ ಇಲ್ಲ ಬುದ್ಧನೂ ಇಲ್ಲ."

ಶಿಷ್ಯನಿಗೆ ಗಲಿಬಿಲಿ, ಗೊಂದಲ. "ಮೊನ್ನೆ ತಾನೇ ನೀನು ಹೇಳಿದೆ 'ಮನಸ್ಸೇಬುದ್ಧ' ಎಂದು ?"

ಗುರು ನುಡಿದ "ಮಗು ಅಳು ನಿಲ್ಲಿಸಲಿ ಎಂಬುದಕ್ಕಾಗಿ ಹಾಗೆ ಹೇಳಿದೆ. ಮಗು ಅಳುವನ್ನು ನಿಲ್ಲಿಸಿದಾಗ ಮನಸ್ಸೂ ಇಲ್ಲ ಬುದ್ಧನೂ ಇಲ್ಲ ಎನ್ನುತ್ತೇನೆ."

ಶಿಷ್ಯನಲ್ಲಿಯ ಮಗು ಅಳುವನ್ನು ನಿಲ್ಲಿಸಿತ್ತು. ಆದ್ದರಿಂದ ಆತನನ್ನು ಹಾಗೆಯೇ ಬಿಡುವುದು ಅಪೇಕ್ಷಣೀಯವಾಗಿತ್ತು.

ಆದರೆ ಗುರು ಹೊಸದಾಗಿ ಆವಿಷ್ಕರಿಸಿದ ನಿರೀಶ್ವರವಾದವನ್ನು ಇದರ ಸ್ವೀಕೃತಿಗೆ ಪಕ್ವತೆ ಗಳಿಸಿಲ್ಲದವರಿಗೆ ಬೋಧಿಸುವಾಗ ಜಾಗರೂಕನಾಗಿರಬೇಕಾಗಿತ್ತು.

ಸೂರ್ಯನನ್ನು ಜನ ಪೂಜಿಸುತ್ತಿದ್ದ ಕಾಲವೊಂದಿತ್ತು : ವಿಜ್ಞಾನ-ಪೂರ್ವಯುಗ. ಮುಂದೆ ವಿಜ್ಞಾನಯುಗ ಬಂದಿತು ಆಗ ಜನರಿಗೆ ತಿಳಿಯಿತು : ಸೂರ್ಯ ದೇವರಲ್ಲ, ಜೀವಂತ ವಸ್ತು ಕೂಡ ಅಲ್ಲ. ಅಂತಿಮವಾಗಿ ಅನುಭಾವದ ಯುಗ ಬಂದಿತು. ಆಗ ಅಸ್ಸೀಸಿಯ ಫ್ರಾನ್ಸಿಸ್ ಸೂರ್ಯನನ್ನು ತನ್ನ ಸೋದರನೆಂದು ಕರೆದು ಗೌರವಪೂರ್ವಕ ಪ್ರೇಮದಿಂದ ಅದರ ಜೊತೆ ಸಂಭಾಷಿಸುತ್ತಿದ್ದ. "ಮೊದಲು ನಿನ್ನಲ್ಲಿದ್ದುದು ಭಯಪೀಡಿತ ಶಿಶುವಿನ ಭರವಸೆ. ಈಗ ನೀನು ಭಯವಿದೂರನಾಗಿರುವೆ. ಎಂದೇ ಆ ಭರವಸೆಯು ಅಗತ್ಯವಿಲ್ಲ. ಒಂದಲ್ಲ ಒಂದು ದಿನ ನೀನು ಅನುಭಾವಾತ್ಮಕ ಹಂತವನ್ನು ತಲಪಬಹುದು. ಆಗ ನೀನು ಪುನಃ ನಿನ್ನ ಭರವಸೆ ಕಂಡುಕೊಳ್ಳುವೆ."

ಭರವಸೆ ಎಂದರೇನು ? ಭಯರಹಿತನಾಗಿ ಸತ್ಯದ ಶೋಧನೆ. ಆದ್ದರಿಂದ ಒಬ್ಬಾತನ ನಂಬಿಕೆಗಳನ್ನು ಪ್ರಶ್ನಿಸಿದಾಗ ಭರವಸೆ ನಷ್ಟವಾಗುವುದಿಲ್ಲ.

ಹಾಗಾದರೆ ವೈಜ್ಞಾನಿಕ ಮನೋಧರ್ಮ ಎಂದರೇನು ? ಅದು—

★ ಸಮಸ್ಯೆಗೆ ವೈಜ್ಞಾನಿಕ ವಿಧಾನ ಪ್ರಕಾರ ಪರಿಹಾರ ಅರಸುತ್ತಿರುವಾಗ ವ್ಯಕ್ತಿಯು ಮನದಲ್ಲಿ ಮೂಡುವ ಭರವಸೆ.

★ ಕಾರ್ಯ-ಕಾರಣ ಸಂಬಂಧಾನ್ವೇಷಣೆಗೈಯುತ್ತಿರುವಾಗ ಮನಕ್ಕೆ ಒದಗುವ ಹದ.

★ ಜ್ಞೇಯನಿಷ್ಠತೆಯ ಪರಾಕಾಷ್ಠೆ.

★ ಸ್ಥಿತಪ್ರಜ್ಞತ್ವದ ಇನ್ನೊಂದು ಹೆಸರು.

## ನಂಬಿಕೆ, ಅರಿವು

"ದೇವರನ್ನು ನಂಬುತ್ತೇನೆ."

"ನಮ್ಮ ಧರ್ಮಗ್ರಂಥಗಳಲ್ಲಿ ಉಕ್ತವಾಗಿರುವವೆಲ್ಲವನ್ನೂ ಪೂರ್ತಿ ನಂಬುತ್ತೇನೆ."

"ರಾಜಕಾರಣಿಗಳ ಮಾತನ್ನು ಸುತರಾಂ ನಂಬಲಾರೆ."

"ಈ ವಿಶ್ವದ ಸಮಸ್ಯೆಗಳಿಗೆ ವಿಜ್ಞಾನ ಎಂದಾದರೂ ಶಾಶ್ವತ ಪರಿಹಾರ ಒದಗಿಸೀತೆಂದು ನಂಬಲಾರೆ."

ಇಂಥ ಹೇಳಿಕೆಗಳಲ್ಲಿ ಬಳಕೆಯಾಗುವ 'ನಂಬಿಕೆ' ಪದದ ಖಚಿತ ಅರ್ಥ ಇದು : ಇತರರು ಹೇಳಿರುವುದನ್ನು ಎರಡನೆಯ ಯೋಚನೆ ಇಲ್ಲದೆ ಸ್ವೀಕರಿಸಿ ತದನುಸಾರ ಜೀವನದೃಷ್ಟಿಯನ್ನು ರೂಪಿಸಿಕೊಳ್ಳುವುದು.

ದೇವರ ಅಸ್ತಿತ್ವವನ್ನು ನಂಬಲು ಅಥವಾ ನಂಬದಿರಲು ಆಧಾರವೇನು ? ಧರ್ಮಗ್ರಂಥಗಳನ್ನು ಬರೆದವರು ಯಾರು ? ಯಾರನ್ನು ರಾಜಕಾರಣಿ ಎನ್ನುತ್ತೇವೆ ? ವಿಜ್ಞಾನದ ಬಗ್ಗೆ ಈ ತೀರ್ಮಾನ ಕೊಟ್ಟವರಾರು ? ಈ ಎಲ್ಲ ಪ್ರಶ್ನೆಗಳಿಗೆ ಅಂತಿಮ ಉತ್ತರ "ಇತರರು."

ನಮ್ಮ ಬದುಕಿಗೆ ಭದ್ರ ಬುನಾದಿ ಒದಗಿಸುವಲ್ಲಿ ನಂಬಿಕೆಯ ಪಾತ್ರ ಮಹತ್ತ್ವಪೂರ್ಣವಾದದ್ದು. ಅಷ್ಟೇಕೆ—ಮೂಲತಃ ಬದುಕಿನ ಬಗ್ಗೆ ಮತ್ತು ನನ್ನ ಬಗ್ಗೆ ನನಗೆ ನಂಬಿಕೆ ಇರದಿದ್ದರೆ ಜೀವನ ಬರಡಾದೀತು, ಅರ್ಥಹೀನವಾದೀತು. ನಂಬಿಕೆಟ್ಟವರಿಲ್ಲವೋ ?

ನಂಬಿಕೆಯನ್ನು ವೈಜ್ಞಾನಿಕ ತಪಾಸಣೆಗೆ ಒಳಪಡಿಸಲಾಗುವುದಿಲ್ಲ. ಪ್ರಹ್ಲಾದನಲ್ಲಿ ವಿಷ್ಣುವಿನ ಅಸ್ತಿತ್ವದ ಬಗ್ಗೆ ಇದ್ದಷ್ಟೇ ಪ್ರಬಲವಾದ ನಂಬಿಕೆ ಹಿರಣ್ಯಕಶಿಪುವಿನಲ್ಲಿ ವಿಷ್ಣುವಿನ ಅನಸ್ತಿತ್ವದ ಬಗ್ಗೆ ಇತ್ತು. ಈ ನಂಬಿಕೆಗಳ—ಒಂದು ಉತ್ತರ ಧ್ರುವ ಇನ್ನೊಂದು ದಕ್ಷಿಣ ಧ್ರುವ — ಘರ್ಷಣೆಯ ಫಲವಾಗಿ ನರಸಿಂಹಾವತಾರವಾಯಿತು, ಹಿರಣ್ಯಕಶಿಪುವಿನ ಸಂಹಾರವಾಯಿತು, ದೇವರ ಅಸ್ತಿತ್ವ ಕುರಿತ 'ನಂಬಿಕೆ' ನಿಜವಾಯಿತು, ಆದರೆ ಇದು ವೈಜ್ಞಾನಿಕ ರುಜುವಾತು ಅಲ್ಲ. ನಂಬಿಕೆಯ ನಾಡಿನಲ್ಲಿ ಕಾರ್ಯ-ಕಾರಣ ಸಂಬಂಧ ನಾಣ್ಯಕ್ಕೆ ಚಲಾವಣೆ ಇರದು.

ಸ್ವತಃ ವಿಜ್ಞಾನವಾದರೂ ನಂಬಿಕೆಯ ದೃಢ ಶಿಲಾಪಾಯದ ಮೇಲೆ ನಿಂತು ನಳನಳಿಸುತ್ತಿರುವುದಾಗಿದೆ ! ಆದರೆ ವಿಜ್ಞಾನದ ಬಗೆಗಿನ ಈ ನಂಬಿಕೆ ಒಬ್ಬ ವ್ಯಕ್ತಿಯ ಅಥವಾ ಗ್ರಂಥದ ಬಗೆಗಿನ ನಂಬಿಕೆಗಿಂತ ಗುಣಾತ್ಮಕವಾಗಿ ತೀರ ಬೇರೆಯೇ.

ವಿಜ್ಞಾನಿಯ ನಂಬಿಕೆಯಲ್ಲಿ ಮೂರು ವಿಶಿಷ್ಟ, ಆದರೆ ಪರಸ್ಪರ ಪೂರಕ, ಭಾವನೆಗಳು ಅಂತರ್ಗತವಾಗಿವೆ :

* ವಿಶ್ವದ ಸಮಸ್ತಕ್ರಿಯೆಗಳಲ್ಲಿಯೂ ನಿರ್ದಿಷ್ಟ ಕ್ರಮವಿದೆ.

ಇಲ್ಲಿಯ ತನಕ ಮಾನವ ಆವಿಷ್ಕರಿಸಿರುವ ವೈಜ್ಞಾನಿಕ ತಥ್ಯಗಳು ಈ ನಂಬಿಕೆಯನ್ನು ಪುರಸ್ಕರಿಸಿವೆ. ಎಲ್ಲಿಯೂ ಎಂದೂ ಕ್ರಮರಾಹಿತ್ಯ ಎದುರಾಗಿಲ್ಲ.

** ಈ ಕ್ರಮವನ್ನು ಗ್ರಹಿಸಿ ಯುಕ್ತ ಪರಿಭಾಷೆಯಲ್ಲಿ ವಿವರಿಸಬಲ್ಲ ಸಾಮರ್ಥ್ಯ ಮಾನವಮತಿಗಿದೆ.

ವಿಜ್ಞಾನದ ಪರಂಪರೆಯೇ ಇದಕ್ಕೆ ನಿದರ್ಶನ. ಆರ್ಕಿಮಿಡೀಸ್ ಆವಿಷ್ಕರಿಸಿದ ತಥ್ಯಗಳು ನ್ಯೂಟನ್ನನಿಗೆ ಲಭಿಸಿದ್ದು ಈ ಕಾರಣದಿಂದ. ಇಂದಿನ ನಾವು ಹಿಂದಿನ ಸಮಸ್ತ ವಿಜ್ಞಾನದ ವರ್ತಮಾನನ್ಯಾಸಧಾರಿಗಳು.

** "ದೇವರು ನವುರು, ಎಂದೂ ಕುಹಕಿ ಅಲ್ಲ." ಅಥವಾ "ಮಾನವನೊಂದಿಗೆ ಭಗವಂತ ಕಪಟದ್ಯೂತ ಆಡುವುದಿಲ್ಲ."

ಇವು ಐನ್‌ಸ್ಟೈನರ ಪ್ರಸಿದ್ಧ ಉಕ್ತಿಗಳು. ಇಲ್ಲಿ 'ದೇವರು' ಮತ್ತು 'ಭಗವಂತ' ನಿಸರ್ಗವನ್ನು ಪ್ರತೀಕಿಸುತ್ತವೆ. ವಿಜ್ಞಾನವೆಂದರೇನು ? ನಿಸರ್ಗದ ಜೊತೆ ಮಾನವ ಆಡುವ ಆಟ. ಇದರಲ್ಲಿ ನಿಸರ್ಗವೆಂದೂ ಪಕ್ಷಪಾತ ಧೋರಣೆ ತಳೆಯದು, ಅಥವಾ ವಂಚನೆ ಮಾಡದು. ತನ್ನ ರಹಸ್ಯಗಳನ್ನು ಮಾನವನಿಗೆ ತಿಳಿಯಪಡಿಸಬೇಕೆಂಬ 'ಸದ್ಬುದ್ಧಿ'ಯಾಗಲೀ ತಿಳಿಯಪಡಿಸಬಾರದೆಂಬ 'ದುರ್ಬುದ್ಧಿ'ಯಾಗಲೀ ಅದಕ್ಕಿಲ್ಲ. ಮುಪ್ಪಿನ ಷಡಕ್ಷರಿ ಹೇಳಿರುವಂತೆ

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ
ಅವರವರ ಭಾವಕ್ಕೆ
ಅವರವರ ಪೂಜೆಗೆ
ಅವರವರಿಗೆಲ್ಲ ಶಿವ ನೀನೊಬ್ಬನೆ

ಆದ್ದರಿಂದ ವಿಜ್ಞಾನಿಯ ನಂಬಿಕೆಯನ್ನು ಜ್ಞೇಯನಿಷ್ಠವೆಂದೂ ಇತರರ ನಂಬಿಕೆಯನ್ನು ಜ್ಞಾತೃನಿಷ್ಠವೆಂದೂ ಹೇಳುತ್ತೇವೆ.

ನಂಬಿಕೆಯನ್ನು ಆಧರಿಸಿ ಬದುಕನ್ನು ಸ್ವೀಕರಿಸಿದಾತನಿಗೆ ಒದಗುವ ಅನುಭವದ ಸಾರವೇ ಅರಿವು. ವಿಜ್ಞಾನಿಯ ಅರಿವಿನ ಹಿನ್ನೆಲೆಯಲ್ಲಿ ನಿಸರ್ಗ ಇದೆ. ಈ ಅರಿವು ಜ್ಞೇಯನಿಷ್ಠವಾದದ್ದು. ಇತರರ ಅರಿವಾದರೋ ಜ್ಞಾತೃನಿಷ್ಠ ನಂಬಿಕೆಗಳ ಮೇಲೆ ಕಟ್ಟಿರುವ ಸೌಧ. ಇದನ್ನು ಪ್ರತ್ಯಕ್ಷ ಪರೀಕ್ಷೆಗೆ ಒಳಪಡಿಸುವಂತಿಲ್ಲ,

ಈ ಗುಣಾತ್ಮಕ ವ್ಯತ್ಯಾಸ ನಮಗೆ ಎದ್ದುಕಾಣುವುದು ವಿಶ್ವವನ್ನು ಕುರಿತಂತೆ ವಿಜ್ಞಾನಿಯ ಮತ್ತು ಧಾರ್ಮಿಕನ ದೃಷ್ಟಿಕೋನಗಳಲ್ಲಿ—ವಿಜ್ಞಾನಿಯದು ಜ್ಞೇಯನಿಷ್ಠ ದೃಷ್ಟಿ, ಇಲ್ಲಿ ವಿಶ್ವವೇ ನಿಕಷ ; ಧಾರ್ಮಿಕನದು ಜ್ಞಾತೃನಿಷ್ಠ ದೃಷ್ಟಿ. ಇಲ್ಲಿ ಪ್ರವಾದಿ/ಗ್ರಂಥ/ಶಾಸ್ತ್ರ/ಪರಂಪರೆ ನಿಕಷ.

ಪಾದ್ರಿ ಅಂತೋಣಿ ಡಿ ಮೆಲ್ಲೊ ಬರೆದಿದ್ದಾರೆ :

ನಾನೂ ನನ್ನ ಮಿತ್ರನೂ 'ಪ್ರಪಂಚ ಧರ್ಮ ಪರಿಷೆ'ಗೆ ಹೋದೆವು. ಅದು ವಾಣಿಜ್ಯ ಪರಿಷೆ ಅಥವಾ ಪ್ರದರ್ಶನ ಅಲ್ಲವಾಗಿದ್ದರೂ ಪೈಪೋಟಿ ತೀವ್ರವಾಗಿತ್ತು, ಪ್ರಚಾರಘೋಷ ತಾರಸ್ಥಾಯಿಯಲ್ಲಿತ್ತು.

ಯಹೂದ್ಯರ ಮಳಿಗೆಯಲ್ಲಿಯ ಪ್ರಚಾರ ಫಲಕಗಳು "ದೇವರು ಪೂರ್ತಿ ದಯಾಮೂರ್ತಿ. ಯಹೂದ್ಯರು ಆತನ ಕಣ್ಮಣಿಗಳು. ಇವರ ಹೊರತಾಗಿ ಯಾರೂ ದಯೆಗೆ ಅರ್ಹರಲ್ಲ" ಎಂದು ಸಾರುತ್ತಿದ್ದುವು.

"ಪರಮಾತ್ಮ ಪರಿಪೂರ್ಣ ಕರುಣಾರ್ಣವ. ಮಹಮದ್ ಒಬ್ಬನೇ ಆತನ ಮುಖವಾಣಿ. ಭಗವಂತನ ಮುಖವಾಣಿಯನ್ನು ಆಲಿಸಿ ಅನುಸರಿಸುವುದರಿಂದ ಮಾತ್ರ ಮುಕ್ತಿ ಒದಗೀತು." ಮುಸ್ಲಿಮರ ಮಳಿಗೆಯಲ್ಲಿ ಈ ಸಂಗತಿ ಕಲಿತೆವು.

ಕ್ರಿಶ್ಚಿಯನ್ ಮಳಿಗೆಯಲ್ಲಿ ದೊರೆತ ಸಂದೇಶ "ಭಗವಂತ ಪ್ರೇಮ ಮಯ. ಒಂದೋ ಇಗರ್ಜಿಗೆ ಶರಣಾಗಿ, ಇಲ್ಲವೇ ನಿತ್ಯನಾರಕಿಗಳಾಗುವ ಅಪಾಯ ಎದುರಿಸಿ."

ಹೊರಗೆ ಬಂದ ಬಳಿಕ ಮಿತ್ರನನ್ನು ಕೇಳಿದೆ "ದೇವರ ಬಗ್ಗೆ ನಿನ್ನ ಅನಿಸಿಕೆ ಏನು ?"

"ಆತ ಸಂಕುಚಿತ ಹೃದಯಿ, ದುರಭಿಮಾನಿ ಮತ್ತು ಕ್ರೂರಿ."

ಮನೆಗೆ ಮರಳಿದೊಡನೆ ದೇವರಿಗೆ ಹೇಳಿದೆ "ಇಂಥ ಒಂದು ವಿಕೃತಿಯನ್ನು ನೀನು ಹೇಗೆ ತಾನೇ ಸಹಿಸುವೆ ? ಶತಮಾನಗಳಿಂದಲೂ ಅವರು ನಿನ್ನ ಹೆಸರಿಗೆ ಮಸಿ ಬಳಿಯುತ್ತಿರುವುದು ನಿನಗೆ ಕಂಡಿಲ್ಲವೇ ?"

ಭಗವಂತ ಹೇಳಿದ "ಆ ಪರಿಷೆಯನ್ನು ಏರ್ಪಡಿಸಿದಾತ ನಾನಲ್ಲ, ನನಗೆ ಅದರೊಳಗೆ ಹೋಗಲು ನಾಚಿಕೆ ಆಗುತ್ತದೆ."

## ಊಹನಾ ಮಾರ್ಗ

ಭವಿಷ್ಯವಾಚನ ಕುರಿತಂತೆ ಎರಡು ಮಾರ್ಗಗಳಿವೆ ಎಂದು ಹಿಂದೆ ಹೇಳಿರುವುದು ಸರಿಯಷ್ಟೆ. ಈ ಪೈಕಿ ವೈಜ್ಞಾನಿಕ ಮಾರ್ಗದ ಇತಿಮಿತಿಗಳನ್ನು ನೋಡಿದ್ದಾಯಿತು.

ಸಾರಾಂಶ : ವೈಜ್ಞಾನಿಕ ಮಾರ್ಗದಿಂದ ಶೇಕಡಾ ನೂರು ನಿಷ್ಕೃಷ್ಟ ಭವಿಷ್ಯವಾಚನ ಅಸಾಧ್ಯ. ವಿಶ್ವದ ಪರಮಸಂಕೀರ್ಣತೆ ಹಾಗೂ ಮಾನವನ

ಅತಿರಿಕ್ತ ಸಾಮರ್ಥ್ಯ ಎರಡೂ ಸೇರಿ ಭವಿಷ್ಯವಾಚನ ಕುರಿತಂತೆ ದುರ್ಗಮ ಭೇದ್ಯ ಭಿತ್ತಿ ನಿರ್ಮಾಣಗೊಂಡಿರುವುದೇ ಕಾರಣ.

ಈಗ ಎರಡನೆಯದಾದ ಊಹನಾಮಾರ್ಗದ ಇತಿಮಿತಿಗಳನ್ನು ಪರಿಶೀಲಿಸೋಣ.

ನೈಸರ್ಗಿಕ ವಿದ್ಯಮಾನಗಳು ಮತ್ತು ನಾವು ನಮ್ಮವಿನ ಸಂಬಂಧ ಏನು ? ಅವು ನಮ್ಮ ಇಚ್ಛೆ-ಅನಿಚ್ಛೆ ಗಮನಿಸದೇ ಸದಾ ಸಂಭವಿಸುತ್ತಲೇ ಇರುವುವು— ಸ್ವಂತ ನಿಯಮಾನುಸಾರ. ಗತಿಶೀಲತೆಯೇ ಜಗತ್ತಿನ ಧರ್ಮ. ಹಗಲು-ಇರುಳು ಮುನ್ನಡೆ, ಋತು ಚಕ್ರದ ಉರುಳಾಟ, ಜೀವಿಷಲಯದಲ್ಲಿಯ ಏರಿಳಿತಗಳು, ನೀರು ಹರಿದು ಕಡಲು ಸೇರಿ ಮೋಡವಾಗಿ ಮೇಲೆ ಏರಿ ಮತ್ತೆ ಮಳೆ ಮೊಗೆವ ಜಲಚಕ್ರ, ಬೀಸುಗಾಳಿ ಮುಂತಾದವು ತತ್‌ಕ್ಷಣ ನಮ್ಮ ಅನುಭವಕ್ಕೆ ಬರುವಂಥವು. ಈ ಎಲ್ಲ ಪ್ರಕ್ರಿಯೆಗಳಲ್ಲಿ ನಾವು ಕೂಡ ಭಾಗಿಗಳು— ಯಥಾಶಕ್ತಿ ನಮ್ಮ ಕೊಡುಗೆಗಳೂ ಇವನ್ನು ಸೇರುತ್ತವೆ. ಆದರೆ ಇಲ್ಲಿಯೂ ಅಂತಿಮ ತೀರ್ಪು ನಿಸರ್ಗದ್ದೇ.

ಮಾನವ-ನಿಸರ್ಗ ಸಂಬಂಧದಲ್ಲಿ ಮಾನವ ಅಪಾರ ಕುತೂಹಲ ತಳೆದು ಕಾಲದಿಂದ ಕಾಲಕ್ಕೆ ತನ್ನ ಅನಿಸಿಕೆಗಳನ್ನು ದಾಖಲಿಸಿದ್ದಾನೆ ; ಅಂದರೆ ನೈಸರ್ಗಿಕ ವಿದ್ಯಮಾನಗಳ ಬಗ್ಗೆ ಮಾನವಮತಿಯ ಪ್ರತಿಕ್ರಿಯೆ. ಇದರ ತಳದಲ್ಲಿ ಮೂರು ವಿಭಿನ್ನ ದೃಷ್ಟಿಕೋನಗಳನ್ನು ಗುರುತಿಸಬಹುದು : ಅನುಭಾವಾತ್ಮಕ, ತಾರ್ಕಿಕ, ಪ್ರಾಯೋಗಿಕ.

ಅನುಭಾವಾತ್ಮಕ ದೃಷ್ಟಿಕೋನ. ವಿಶ್ವವಿದ್ಯಮಾನಗಳಿಂದ ಸ್ಫೂರ್ತಿದೀಪ್ತರಾದ ಋಷಿಪುಂಗವರು, ಕಲಾಕುಶಲಿಗಳು, ಕವಿಶ್ರೇಷ್ಠರು ಮೊದಲಾದ ಸೃಜನಶೀಲ ವ್ಯಕ್ತಿಗಳು ತಮ್ಮ ಆನಂದೋದ್ಗಾರಗಳನ್ನು ವಿವಿಧ ಮಾಧ್ಯಮಗಳ ಮೂಲಕ ಅಭಿವ್ಯಕ್ತಿಸುತ್ತಾರೆ : ಮಂತ್ರ, ಚಿತ್ರ, ಶಿಲ್ಪ, ಕಾವ್ಯ ಇತ್ಯಾದಿ. ಎಲ್ಲ ಧಾರ್ಮಿಕ ಚಿಂತನೆಗಳ ಹಾಗೂ ಕಲಾಪ್ರಕಾರಗಳ ಮೂಲದಲ್ಲಿ ಲಕಲಕಿಸುತ್ತಿರುವುದು ಈ ಸ್ಫೂರ್ತಿ—ಅನುಭಾವಾತ್ಮಕ ತುರೀಯ ಮಾನಸಿಕ ಸ್ಥಿತಿ.

ಇಂಥ ಒಂದು ಚೇತನದ ಚಿಂತನೆ ಸಾಗಿಂವ ಧಾಟಿ ಇದು :

ವಿಶ್ವ ಸರ್ವತ್ರ ವ್ಯಾಪಿಸಿದೆ ಆದಿಶಕ್ತಿ—ಸರ್ವಾಂತರ್ಯಾಮಿ, ಸರ್ವಶಕ್ತ, ಸರ್ವಜ್ಞಾನಿ, ಸಾರ್ವಕಾಲಿಕ ಪರಾತ್ಪರ ವಸ್ತು. ಅದು ಅಗೋಚರ,

ಅಮೂರ್ತ, ಅಲಭ್ಯ, ಇಂದ್ರಿಯಾತೀತ, ಆದರೆ ಆದರ ಅವತಾರಗಳು ಗೋಚರ, ಮೂರ್ತ, ಲಭ್ಯ ಮತ್ತು ಇಂದ್ರಿಯಗಮ್ಯ. ಇವೇ ನಾವು ಅನುಭವಿಸುವ ವಿಶ್ವವಿದ್ಯಮಾನಗಳು.

ಸೂರ್ಯ ಚಂದ್ರ ಅದರ ನೇತ್ರದ್ವಯ, ಸೃಷ್ಟಿ ಸ್ಥಿತಿಲಯ ಕ್ರೀಡೆ, ಸಮಸ್ತವಿಶ್ವವೇ ದೇಹ. ಮಾನವನನ್ನು ಅದು ತನ್ನ ಎರಕದಲ್ಲಿ ಕಡೆದು ಈ ನಿರಂತರ ಲೀಲಾವಿನೋದಗಳಲ್ಲಿ ಮಗ್ನನಾಗಿರುವಂತೆ ನಿಯೋಜಿಸಿ ಸಂತೋಷಿಸುತ್ತದೆ. ಕ್ರೀಡಾನಿಯಮಗಳನ್ನು ಅದೇ ನಿರ್ಧರಿಸಿ ವಿಧಿಸಿ ಮಾನವನ ಭೂತ ವರ್ತಮಾನ ಭವಿಷ್ಯಗಳನ್ನು ತೀರ್ಮಾನಿಸುತ್ತದೆ :

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ
ಗೀತೆ ೧೮-೬೧

ಎಲೈ ಅರ್ಜುನ, ಸರ್ವಪ್ರಾಣಿಗಳನ್ನು ಯಂತ್ರಾರೂಢವಾದ ಬೊಂಬೆಗಳಂತೆ ಮಾಯೆಯಿಂದ ತಿರುಗಿಸುತ್ತ ಈಶ್ವರ ಸರ್ವಜೀವರ ಹೃದಯ ಪ್ರದೇಶದಲ್ಲಿ ನೆಲಸಿರುತ್ತಾನೆ. (ಸ್ವಾಮಿ ಆದಿದೇವಾನಂದರ ಅನುವಾದ)

ಹಾಗಾದರೆ ಮಾನವ ಮಾಡಬೇಕಾದದ್ದೇನು ? ತನ್ನ ಈ ಸಹಾಯ ಹೀನ ಪರಿಸ್ಥಿತಿ ಗಮನಿಸಿ ಆ ಪರಾತ್ಪರ ವಸ್ತುವಿಗೆ ಶರಣಾಗುವುದು— ಇದೊಂದೇ ಆತನಿಗೆ ಶಾಶ್ವತಾನಂದ ಗಳಿಸಲು ಇರುವ ಮಾರ್ಗ.

ಪ್ರತಿಯೊಂದು ಧರ್ಮಗ್ರಂಥದ ತಳದಲ್ಲಿಯೂ ಅನುರಣಿಸುತ್ತಿರುವ ಚಿಂತನಲಹರಿ ಇದೇ. ಕಾರಣವೇನು ?

ವಿಶ್ವದ ಗಹನ ಗಭೀರತೆಯ ಮತ್ತು ಅಸೀಮ ವ್ಯಾಪ್ತಿಯ ಎದುರು ನಿಂತ ಮಾನವಮತಿಯ ಪ್ರಧಾನ ಶ್ರುತಿ ಪರಿಶುದ್ಧ ವಿಸ್ಮಯ, ಬೆರಗು— ಭಯ, ಅಶಕ್ತತೆ, ದೈನ್ಯ, ಆಶ್ಚರ್ಯ, ಆನಂದ ಮುಂತಾದ ಭಾವಗಳ ಮಿಶ್ರಣ. ಇದಕ್ಕೆ ಬೇರೆ ಯಾವ ತೆರನಾದ ಸಂಗತ ವಿವರಣೆಯನ್ನು ಆತ ಕೊಡಬಲ್ಲ ?

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ
ಗೀತೆ ೧೮-೬೬

ಸರ್ವ ಧರ್ಮಗಳನ್ನೂ ಪರಿತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು. ನಾನು ನಿನ್ನನ್ನು ಸರ್ವಪಾಪಗಳಿಂದ ಬಿಡಿಸುವೆನು. ಶೋಕಿಸಬೇಡ. (ಸ್ವಾಮಿ ಆದಿದೇವಾನಂದರ ಅನುವಾದ)

He whom Allah scorneth, there is none to give him honour. Lo ! Allah doeth what He will.

The Glorious Koran-Surah XXII-18

ಭಗವಂತನಿಂದ ನಿರಾಕರಿಸಲ್ಪಟ್ಟವನಿಗೆ ಯಾರಿಂದಲೂ ರಕ್ಷಣೆ ಒದಗದು, ಭಗವಂತ ತನ್ನ ಇಚ್ಛೆಯನ್ನು ನೆರವೇರಿಸಿಯೇ ತೀರುತ್ತಾನೆ.

The heavens declare his righteousnes, and all the people see his glory.

The New Testament—Psalms 97-6

ಆತನ ಪರಿಶುಭ್ರತೆಯನ್ನು ಗಗನವೇ ಸಾರುತ್ತದೆ. ಸಕಲ ಜನರೂ ಆತನ ವೈಭವವನ್ನು ನೋಡುತ್ತಾರೆ.

Tao is all pervading, and its use is inexhaustible ! Fathomless ! Like the fountain head of all things. Its sharp edges rounded off. Its tangles untied, its light tempered, its turmoil submerged, yet crystal clear like still water it seems to remain, I do not know whose Son it is, an image of what existed before God. Laotse, the Book of Tao I-iv

ವಿಶ್ವಸತ್ತ್ವ ಸರ್ವಾಂತರ್ಯಾಮಿ. ಎಷ್ಟು ಉಪಯೋಗಿಸಿದರೂ ಬರಿದಾಗದು. ತಳರಹಿತ ! ಎಲ್ಲ ಚಿಂತನೆಗಳ ಮೂಲ ಸೆಲೆಯಂತೆ. ಆದರ ಹರಿತ ಅಂಚುಗಳನ್ನು ಬೊಡ್ಡಾಗಿಸಿದರೂ ಕಗ್ಗಂಟುಗಳನ್ನು ಬಿಡಿಸಿದರೂ ಬೆಳಕನ್ನು ಕಲಕಿದರೂ ತಳಮಳವನ್ನು ಅದುಮಿಟ್ಟರೂ ಅದು ಸ್ಫಟಿಕ ಶುಭ್ರ ನಿಶ್ಚಲ ಸಲಿಲದ ಹಾಗೆ ಇರುವಂತೆ ತೋರುತ್ತದೆ. ಅದು ಯಾರ ಮಗನೋ ಗೊತ್ತಿಲ್ಲ ನನಗೆ — ದೇವರಿಗಿಂತ ಮೊದಲು ಇದ್ದುದರ ಪ್ರತಿಬಿಂಬ.

ಜಡವೆಂಬುದೇನು ? ಸೃಷ್ಟಿಯಲಿ ಚೇತನ ಸುಪ್ತಿ,
ಅಡಗಿ ನಿದ್ರಿಪುದಲ್ಲಿ ಚೈತನ್ಯದಗ್ನಿ
ಮಿಡಿಯೆ ಪರಸತ್ತ್ವ ವಿದ್ಯುದ್ದೀಪ್ತಿಯುದನಾಗ
ನಡೆವುದದು ಜೀವಿವೊಲು ಮಂಕುತಿಮ್ಮ

ಇಲ್ಲೆಲ್ಲ ಅನುರಣಿಸುತ್ತಿರುವುದು ಅದೇ ಮೂಲಭಾವನೆ: ಅನಂತ ಪರಾತ್ಪರ ವಸ್ತುವಿನ ಅನಂತಾಲ್ಪಾಂಶವಾದ ನಾನು ಅದರ ಕೃಪೆಯಿಂದ ಮಾತ್ರ ಉಳಿದಿರಬಲ್ಲೆ.

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಂ
ಯತ್ಕೃಪಾ ತಮಹಂ ವಂದೇ ಪರಮಾನಂದ ಮಾಧವಂ

ಗೀತಾಧ್ಯಾನಂ ೮

ಯಾರ ಕೃಪೆ ಮೂಕನನ್ನು ವಾಚಾಳಿಯಾಗಿ ಮಾಡುವುದೊ ಕುಂಟನನ್ನು ಬೆಟ್ಟಹತ್ತುವಂತೆ ಮಾಡುವುದೊ ಅಂಥ ಪರಮಾನಂದ ಸ್ವರೂಪನಾದ ಮಾಧವನನ್ನು ವಂದಿಸುತ್ತೇನೆ.

ಈಗ, ಈ ಭಾವುಕತೆಯ ಉನ್ಮತ್ತತೆಯಿಂದ ಜ್ಞೇಯನಿಷ್ಠತೆಯ ವಾಸ್ತವತೆಗೆ ಬರೋಣ. ನಿಸರ್ಗಕ್ಕೆ ಜೀವಿಯನ್ನು ಸೃಷ್ಟಿಸುವುದರಲ್ಲಿ ಏನಾದರೂ ಉದ್ದೇಶ ಇರಬಹುದು ಎಂದು ಭಾವಿಸಿದರೆ ಅದು ಈ ಜೀವಿ ಸರ್ವಾಂಗ ಸುಂದರವಾಗಿ ಪೂರ್ಣಾಯುಷ್ಯ ಬಾಳಬೇಕು ಎಂಬುದು ಮಾತ್ರ. ಮಾನವನಿಗೆ ಮಾತ್ರವಲ್ಲ, ಎಲ್ಲ ಜೀವಿಗಳಿಗೆ (=ಸಸ್ಯಗಳು ಮತ್ತು ಪ್ರಾಣಿಗಳು) ಎಲ್ಲ ಕಾಲಗಳಲ್ಲಿ ಅನ್ವಯವಾಗುವ ಸಾರ್ವತ್ರಿಕ ಹೇಳಿಕೆ ಇದು. ಇಂಥ ಬಾಳ್ವೆಯನ್ನು ಸಾಧ್ಯವಾಗಿಸಲು ನಿಸರ್ಗ ಪ್ರತಿಯೊಂದು ಜೀವಿಗೂ ಸಾಕಷ್ಟು ಸ್ವರಕ್ಷಣ ಸೌಕರ್ಯಗಳನ್ನು ಒದಗಿಸಿದೆ. ಅಂದ ಮೇಲೆ ಜೀವಿಯ ಆಸೆ ಅಭೀಪ್ಸೆಗಳು ಸ್ವಾರ್ಥಮೂಲವಾಗಿರಬೇಕಾದದ್ದು ನಿರೀಕ್ಷಿತವೇ. ಎಲ್ಲ ಅನುಭಾವಾತ್ಮಕ ಉದ್ಗಾರಗಳೂ ಈ ಆಧಾರ ಶ್ರುತಿಯಿಂದ ಉದ್ಭವವಾದವೆಂದು ಅವನ್ನು ನಿರಪೇಕ್ಷ ತಪಾಸಣೆಗೆ ಒಡ್ಡಿದಾಗ ಗೊತ್ತಾಗುತ್ತದೆ.

ಆದ್ದರಿಂದ ಅನುಭಾವಾತ್ಮಕ ಸೂಕ್ತಿಗಳು ಜೀವನವನ್ನು ವರ್ಣಿಸುವ ಕಾವ್ಯೋಕ್ತಿಗಳು ಮಾತ್ರ ಎಂದು ಪರಿಗಣಿಸಬೇಕು— ಸ್ಫೂರ್ತಿದೀಪ್ತ ಸೂತ್ರಗಳಂತೆ. ಈ ಕಾರಣದಿಂದ ಮಾತ್ರ ಇವು ವ್ಯಾಪಕ ಅನ್ವಯ ಪಡೆದಿವೆಯೇ ವಿನಾ ಪ್ರವಾದಿಯ ಕಿವಿಯೊಳಕ್ಕೆ ಭಗವಂತ ಇವನ್ನು ಗುಟ್ಟಾಗಿ ಉಸುರಿ ಬಳಿಕ ಈ ಪ್ರವಾದಿ ಅವನ್ನು ಭಕ್ತರ ಅಭ್ಯುದಯಾರ್ಥ ಪ್ರಚುರಗೊಳಿಸಿದ್ದರಿಂದ ಅಲ್ಲ.

ಅನುಭಾವಾತ್ಮಕ ಸೂಕ್ತಿಗಳ ಮತ್ತು ವೈಜ್ಞಾನಿಕ ಸೂತ್ರಗಳ ನಡುವಿನ ಸಾಮ್ಯತೀರ ಮೇಲು ಪದರದ್ದು—ಅಸಂಖ್ಯ ಬಿಡಿ ನಿದರ್ಶನಗಳ ಅಥವಾ ವಿವಿಕ್ತ ಘಟನೆಗಳ ತಳದಲ್ಲಿಯ ಸ್ವರೂಪವನ್ನು ಪ್ರತೀಕಭಾಷೆಯಲ್ಲಿ ನಿರೂಪಿಸಿ

ದಂಥವು ಎನ್ನುವಷ್ಟರ ಮಟ್ಟಿಗೆ ಮಾತ್ರ. ಉದಾಹರಣೆಗೆ ಜಾತಸ್ಯ ಮರಣಂ ಧ್ರುವಂ—ಹುಟ್ಟಿದಾತ ಸಾಯಲೇಬೇಕು ; ಅಥವಾ $E = hv$.

ವ್ಯತ್ಯಾಸ? ಇವುಗಳ ಉದ್ಭವ ಸಂದರ್ಭಗಳನ್ನು ಗಮನಿಸಿದಾಗ ತಿಳಿಯುತ್ತದೆ. ಸೂಕ್ತಿಗಳು ಊಹಾಜನ್ಯ, ಜ್ಞಾತೃನಿಷ್ಠ. ಸೂತ್ರಗಳು ಪ್ರಯೋಗ ಲಭ್ಯ, ಜ್ಞೇಯನಿಷ್ಠ. ಎರಡಕ್ಕೂ ಪ್ರೇರಣೆ ಒದಗಿಸುವುದು ವಿಶ್ವವೇ, ಅನುಕ್ರಿಯೆ ಪ್ರದರ್ಶಿಸುವ ದ್ರವ್ಯ ಮಾನವಮತಿಯೇ, ಎರಡರ ತಳದಲ್ಲಿಯೂ ಸ್ಪಂದಿಸುತ್ತಿರುವುದು ಅದೇ ಸೃಜನಶೀಲತೆ ಮತ್ತು ಸ್ಫೂರ್ತಿದೀಪ್ತಿ. ಎಂದೇ ಸೂಕ್ತಿ–ಸೂತ್ರ ನಿಕಟ ಸಂಪರ್ಕ ಮತ್ತು ಪ್ರಭಾವ.

ಸೂಕ್ತಿಗಳನ್ನು ಕಾವ್ಯೋಕ್ತಿಗಳೆಂದು ಗ್ರಹಿಸಿ ಆನಂದಿಸಬೇಕು. ಜೀವನಕ್ಕೆ ಅನ್ವಯಿಸಿ ಸಂಸ್ಕಾರ ಪಡೆಯಬೇಕು. ಪ್ರಾಯೋಗಿಕ ಅಥವಾ ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಲಾಗದು.

ಸೂತ್ರಗಳನ್ನು ಭೌತವಿಶ್ವಕ್ಕೆ ಬರೆದ ಭಾಷ್ಯಗಳೆಂದು ತಿಳಿದು ಅನ್ವಯಿಸಬೇಕು. ವಿಶ್ವವಿದ್ಯಮಾನಗಳ ತಳದಲ್ಲಿರುವ ಸಾಚೆ (ಅಚ್ಚು) ಎಂದು ತಿಳಿಯಬೇಕು. ಅವು ವ್ಯಾಖ್ಯಿತವಾಗಿರುವ ಚೌಕಟ್ಟಿನ ಹೊರಗೆ ಅವನ್ನು ಅನ್ವಯಿಸಲಾಗದು.

ಸೂಕ್ತಿ : ಸಂಪೂರ್ಣ ಗೋಳದಲಿ ನೆನೆದೆಡೆಯೆ ಕೇಂದ್ರವಲ !

ಸೂತ್ರ : ಖಗೋಳದ ಅಗಾಧ ಗಾತ್ರಕ್ಕೆ ಹೋಲಿಸುವಾಗ ವೀಕ್ಷಕ ನಿಂತ ನೆಲೆಯೋ ವಿಶ್ವಕೇಂದ್ರವಾಗುತ್ತದೆ.

ಸೂಕ್ತಿ : ಅಖಂಡ ಪರಾತ್ಪರ ವಸ್ತುವಿನ ಅಸಂಖ್ಯ ರೂಪಗಳೇ ವಿಶ್ವ ವೈವಿಧ್ಯ.

ಸೂತ್ರ : $E = mc^2$

ಆದ್ದರಿಂದ ವಿಶ್ವದ ಸಮಸ್ತ ವಿದ್ಯಮಾನಗಳನ್ನೂ ಅಂತಃಸ್ಫೂರ್ತಿಯಿಂದ ಪರಾಂಬರಿಸಿ ವಿವರಿಸುವ ನಿಲವಿಗೆ ಅನುಭಾವಾತ್ಮಕ ದೃಷ್ಟಿಕೋನ ಎನ್ನುತ್ತೇವೆ.

ತಾರ್ಕಿಕ ದೃಷ್ಟಿಕೋನ. ನಮ್ಮ ಎದುರು ಏನೋ ಒಂದು ಘಟನೆ ಸಂಭವಿಸುತ್ತದೆ : ತೊಟ್ಟು ಕಳಚಿದ ಹಣ್ಣು ಮರದಿಂದ ನೆಲಕ್ಕೆ ಕೆಡೆಯುತ್ತದೆ. ಇದು ಕಾರ್ಯ. ತಂತಾನೇ ಯಾವ ಕಾರ್ಯವೂ ಜರಗದು. ಇದರ ಹಿನ್ನೆಲೆಯಲ್ಲಿ ಯಾವುದೋ ಅವ್ಯಕ್ತ ಕಾರಣವಿರಬೇಕು. ಈ ನಂಬಿಕೆ ಅಥವಾ ಭರವಸೆಯಿಂದ ಕಾರಣ ಶೋಧನೆಗೆ ಇಳಿಯುತ್ತೇವೆ. ಫಲವಾಗಿ ನಾವೊಂದು

ತೀರ್ಮಾನಕ್ಕೆ ಬರುತ್ತೇವೆ : ಭೂಗುರುತ್ವಬಲ ಆ ಹಣ್ಣನ್ನು ಭೂಕೇಂದ್ರಾಭಿಮುಖವಾಗಿ ಸೆಳೆಯುತ್ತಿತ್ತು; ತೊಟ್ಟು ತುಂಡಾದದ್ದೇ ತಡ ಅವಲಂಬನ ಕಳೆದುಕೊಂಡ ಹಣ್ಣು ನೆಲಕ್ಕೆ ಬಿತ್ತು. ಇಲ್ಲಿ ಗುರುತ್ವಬಲ 'ಕಾರಣ.' ಹಣ್ಣಿನ ಪತನ 'ಕಾರ್ಯ.' ಮುಂದಿನ ಹಂತ ವೈಜ್ಞಾನಿಕ ವಿಧಾನವನ್ನು ಅನ್ವಯಿಸಿ ಗುರುತ್ವಬಲದ ಗುಣಲಕ್ಷಣಗಳ ನಿರ್ಣಯ. ಈ ಎಲ್ಲ ಹಂತಗಳನ್ನು ಬಂಧಿಸುವ ಕೊಂಡಿ ಅಥವಾ ಬೆಸೆಯುವ ಅಂಚು ತರ್ಕ: ಕಾರ್ಯ-ಕಾರಣ ಸಂಬಂಧ ಸ್ಥಾಪಿಸುವ ಮಾನಸಿಕ ಪ್ರಕ್ರಿಯೆ ಇದು. ವಿಜ್ಞಾನದಲ್ಲಿ ತರ್ಕದ ಪಾತ್ರ ಅತಿ ಮುಖ್ಯ—ವಿಜ್ಞಾನ ಎಂದರೆ ತರ್ಕ ಎನ್ನುವವರೆಗೂ. ಅಂದ ಮಾತ್ರಕ್ಕೆ ತಾರ್ಕಿಕವಾದದ್ದೆಲ್ಲವೂ ವಿಜ್ಞಾನವಾಗಬೇಕಾಗಿಲ್ಲ.

ಉದಾಹರಣೆಗೆ ಯಾವುದೇ ಕಾದಂಬರಿಯಲ್ಲಿ ಪಾತ್ರ-ಸನ್ನಿವೇಶಗಳನು, ತಾರ್ಕಿಕವಾಗಿ ಹೆಣೆದಿರುವ ಭದ್ರ ಅಧೋರಚನೆ ಇರಲೇಬೇಕು. ಇಲ್ಲವಾದರೆ ಕಾದಂಬರಿಯ ಬಂಧ ಶಿಥಿಲವಾಗಿ ಅದು ಪೇಲವವೆನ್ನಿಸುತ್ತದೆ. ಹಾಗಿದ್ದರೂ ಯಾವ ಉತ್ಕೃಷ್ಟ ಕಾದಂಬರಿಯೂ ವಿಜ್ಞಾನವೆನ್ನಿಸದು.

ಸಂವಹನಪ್ರಕಾರ ಯಾವುದೇ ಇರಲಿ—ವಿಜ್ಞಾನ, ಮಾನವಿಕ, ತತ್ತ್ವಶಾಸ್ತ್ರ, ಕಲೆ, ಕ್ರೀಡೆ, ಸಾಹಸ ಇತ್ಯಾದಿ—ಅದು ತರ್ಕಭೂಯಿಷ್ಠವಾಗಿರಲೇಬೇಕು. ಮಹತ್ಕೃತಿಯೊಂದು ತರ್ಕಸುಂದರ ರಚನೆ ಕೂಡ ಹೌದು.

ಆದ್ದರಿಂದ ವಿಶ್ವದ ಸಮಸ್ತ ವಿದ್ಯಮಾನಗಳನ್ನು ತರ್ಕದ ಕಣ್ಣಿನಿಂದ ಪರಾಂಬರಿಸಿ ವಿವರಿಸುವ ನಿಲವಿಗೆ ತಾರ್ಕಿಕ ದೃಷ್ಟಿಕೋನ ಎನ್ನುತ್ತೇವೆ.

**ಪ್ರಾಯೋಗಿಕ ದೃಷ್ಟಿಕೋನ.** ವೈಜ್ಞಾನಿಕ ದೃಷ್ಟಿಕೋನದ ಪರ್ಯಾಯನಾಮ. ನಾವು ಮುಂದಿಸಿದ ಒಂದು ವಾದದಲ್ಲಿ ಕಾರ್ಯ-ಕಾರಣ ಸಂಬಂಧ ಸ್ಥಾಪಿತವಾಗಿರಬಹುದು. ತಾರ್ಕಿಕವಾಗಿ ಅದು ಬಲು ಸುಂದರವಾಗಿರಬಹುದು. ಆದರೆ ಪ್ರಯೋಗದ ನಿಕಷದಲ್ಲಿ ಅದು ಉತ್ತೀರ್ಣವಾದ ಹೊರತು ವಿಜ್ಞಾನ ಎಂಬ ಅಂತಸ್ತು ಪಡೆಯದು. ಉದಾಹರಣೆಗೆ—

ಗ್ರಹಚಲನನಿಯಮಗಳನ್ನು ಆವಿಷ್ಕರಿಸಿದ ಕೆಪ್ಲರನ ಬಗ್ಗೆ ಹಿಂದೆ ಉಲ್ಲೇಖಿಸಿದೆ. ಈ ಭೌತಸತ್ಯವನ್ನು ಪ್ರಯೋಗದ ನಿಕಷದಲ್ಲಿ ರುಜುವಾತಿಸುವ ಮೊದಲು ಆತ ತರ್ಕಸುಂದರ ದಾರಿ ಹಿಡಿದು ಕುರುಡು ಕೊನೆ ತಲಪಿ ಹತಾಶೆಗೊಂಡು ಅನ್ಯವಿಧಿ ಇಲ್ಲದೇ ತನ್ನ ಆ ಮುದ್ದಿನ ಮಾನಸಿಕ ಶಿಶುವನ್ನು ತೊರೆದು ಪ್ರಯೋಗಕಠಿಣ ಮಾರ್ಗ ಕ್ರಮಿಸಿ ಯಶಸ್ವಿಯಾದದ್ದೊಂದು ಹಳೆಯ ಕತೆ. ಕೆಪ್ಲರ್ ಆರಂಭದಲ್ಲಿ ತರ್ಕಿಸಿದ್ದು ಹೀಗೆ :

ಭಗವಂತ ಶ್ರೇಷ್ಠ ಗಣಿತವಿದ. ಇದಕ್ಕೆ ಒಂದು ನಿದರ್ಶನ ಸೌರವ್ಯೂಹ ದಲ್ಲಿ ಆತ ಸ್ಥಾಪಿಸಿರುವ ೬ ಗ್ರಹಗಳು (ಆತನ ಕಾಲದಲ್ಲಿ ಗೊತ್ತಿದ್ದವು ಬುಧ, ಶುಕ್ರ, ಭೂಮಿ, ಕುಜ, ಗುರು, ಶನಿ). ಇದೊಂದು ಅದ್ಭುತ ಏಕೈಕ ಸಂಖ್ಯೆ. ಇದರ ಅಪವರ್ತನಗಳ ಮೊತ್ತವೂ ಗುಣಲಬ್ಧವೂ ಇದೇ ! ೬ =೧ + ೨ + ೩ =೧ × ೨ × ೩. ಇಂಥ ಇನ್ನೊಂದು ಸಂಖ್ಯೆ ಇಲ್ಲವೇ ಇಲ್ಲ. ಭಗವಂತ ಯಾವುದೋ ಗಣಿತ ಆಲೇಖ್ಯಾನುಸಾರ ಈ ಸೌರವ್ಯೂಹವನ್ನು ರಚಿಸಿದ್ದಾನೆ. ಅದನ್ನು ತಾನು ಪತ್ತೆ ಹಚ್ಚಲೇಬೇಕು. ಅಂದರೆ ಸಂಖ್ಯೆ ೬ನ್ನು ಸುಂದರವಾಗಿ ಸೆರೆಹಿಡಿದಿಟ್ಟಿರುವ ಒಂದು ಗಣಿತಾಕೃತಿಯ ಶೋಧ.........ವಿಶ್ವದಲ್ಲಿರುವ ಸಮಘನಾಕೃತಿಗಳು ೫ ಮಾತ್ರ : ಸಮಚತುಷ್ಫಲಕ (೪ ಸರ್ವಸಮಮುಖ ಗಳಿಂದಾದ ಘನಾಕೃತಿ), ಸಮಷಟ್ಫಲಕ (೬), ಸಮಅಷ್ಟಫಲಕ (೮), ಸಮದ್ವಾದಶಫಲಕ (೧೨), ಸಮವಿಂಶತಿಫಲಕ (೨೦). ಈ ಪ್ರತಿಯೊಂದು ಸಮಘನಾಕೃತಿ ಕುರಿತಂತೆ ಎಲ್ಲ ಫಲಕಗಳನ್ನು ಅಂತಃಸ್ಪರ್ಶಿಸುವ ಅಂತರ್ಗೋಳ ವನ್ನೂ ಎಲ್ಲ ಶೃಂಗಗಳನ್ನು ಒಳಗೊಳ್ಳುವ ಬಹಿರ್ಗೋಳವನ್ನೂ ರಚಿಸ ಬಹುದು. ಇವೆರಡೂ ಏಕಕೇಂದ್ರೀಯ ಗೋಳಗಳು. ಸಮಘನಾಕೃತಿಗಳ ಹೊರತಾಗಿ ಬೇರೆ ಯಾವ ಘನಾಕೃತಿಗೂ ಈ ಗೋಳಗಳಿಲ್ಲ. ಈಗ, ಯಾವುದೇ ಸಮಘನಾಕೃತಿ ತೆಗೆದುಕೊಂಡು ಅದರ ಅಂತರ್ - ಮತ್ತು ಬಹಿರ್–ಗೋಳ ಗಳನ್ನು ರಚಿಸೋಣ. ಈ ಬಹಿರ್ಗೋಳ ಅಂತರ್ಗೋಳವಾಗಿರುವಂತೆ ಇನ್ನೊಂದು ಸಮಘನಾಕೃತಿ ರಚಿಸಿ ಇದರ ಬಹಿರ್ಗೋಳವನ್ನು ರಚಿಸೋಣ. ಇದೇ ರೀತಿ ಮುಂದುವರಿದರೆ ನಮಗೆ ೬ ಏಕಕೇಂದ್ರೀಯ ಗೋಳಗಳು ದೊರೆ ಯುತ್ತವೆ. ಇದೇ ಕೆಪ್ಲರ್‌ಕಂಡ ಭಗವಂತನ ಆಲೇಖ್ಯ: ಕೇಂದ್ರದಲ್ಲಿ ಸೂರ್ಯ, ಒಂದೊಂದು ಗೋಳದ ತ್ರಿಜ್ಯ ಒಂದೊಂದು ಗ್ರಹಕಕ್ಷೆಯ ತ್ರಿಜ್ಯ ! ಗ್ರಹಗಳ ಕಕ್ಷಾತ್ರಿಜ್ಯಗಳು ಗೊತ್ತಿರುವುದರಿಂದ ಈಗ ನಾವು ಮಾಡಬೇಕಾದ್ದಿಷ್ಟು : ಯಾವ ಯಾವ ಸಮಘನಾಕೃತಿಯನ್ನು ಯಾವ ಯಾವ ಸ್ಥಾನದಲ್ಲಿರಿಸಿದರೆ ಆಯಾ ಗೋಳತ್ರಿಜ್ಯ ಆಯಾ ಕಕ್ಷಾತ್ರಿಜ್ಯದ ಜೊತೆ ಹೊಂದುತ್ತದೆ ಎಂದು ತರ್ಕಿಸುವುದು.........

ಕೆಪ್ಲರನ ಈ ಮಾನಸಿಕ ದೊಂಬರಾಟ ಸಫಲವಾಗಲಿಲ್ಲ ! ಏಕೆ ? ತರ್ಕ ಸೌಂದರ್ಯ ಸರಿ, ಆದರೆ ಇದು ಪ್ರಾಯೋಗಿಕ ಸತ್ಯವಾಗಲಿಲ್ಲ.

ಆದ್ದರಿಂದ ವಿಶ್ವದ ಸಮಸ್ತ ವಿದ್ಯಮಾನಗಳನ್ನೂ ಪ್ರಯೋಗದ ನಿಕಷಕ್ಕೆ

ಉಜ್ಜಿ ದೊರೆತ ಫಲಿತಾಂಶಾನುಸಾರ ವಿವರಿಸುವ ನಿಲವಿಗೆ ಪ್ರಾಯೋಗಿಕ ದೃಷ್ಟಿಕೋನ ಎನ್ನುತ್ತೇವೆ. 'ವೈಜ್ಞಾನಿಕ ಮಾರ್ಗ'ದಲ್ಲಿ ಇದನ್ನು ಸಾಕಷ್ಟು ವಿವೇಚಿಸಿದೆ.

## ಅನುಭಾವ ವಾಙ್ಮಯ

ಭವಿಷ್ಯವಾಚನ ಕುರಿತಂತೆ ಊಹನಾಮಾರ್ಗಾವಲಂಬಿಗಳು—ವೈಜ್ಞಾನಿಕ ಮಾರ್ಗಾವಲಂಬಿಗಳು ಅಲ್ಲ—ಅನುಭಾವವನ್ನೂ ತರ್ಕವನ್ನೂ ಬೆಸೆದು ತಮ್ಮ ಹಾದಿಯನ್ನು ಕಡಿದಿದ್ದಾರೆ. ಇವರ ಪ್ರಕಾರ—

ಮಹಾತ್ಮರು, ಋಷಿಪುಂಗವರು, ದೇವಮಾನವರು ಮೊದಲಾದ ದೈವಿಕ ಪ್ರಭಾದೀಪ್ತರು ಅಂತಃಸ್ಫೂರ್ತಿಯ ತುರೀಯಾವಸ್ಥೆಯಲ್ಲಿ ಆ ವಿಶ್ವವಾಣಿಗೆ ಮಾಧ್ಯಮ(ಮುಖವಾಣಿ)ಗಳಾಗಿ ವರ್ತಿಸುತ್ತಾರೆ. ಇವರೇ ಅನುಭಾವಿಗಳು. ಇವರು ಉಸುರುವ ಮಂತ್ರ ಸೂಕ್ತಿ ಪದ ಎಲ್ಲವೂ ಭಗವತ್ಪ್ರೇರಿತವೇ. ಇವು ಅನುಭಾವೋಕ್ತಿಗಳು. ಇವನ್ನು ಸಂಗ್ರಹಿಸಿ ವಿಶ್ಲೇಷಿಸಿ ವ್ಯಾಖ್ಯಾನಿಸಿದರೆ ಪರಮಾತ್ಮನ ಮನಸ್ಸಿನ ಇಣುಕುನೋಟ ನಮಗೆ ಲಭಿಸುತ್ತದೆ. ಇದರ ನೆರವಿನಿಂದ ನಾವು ತ್ರಿಕಾಲಜ್ಞಾನ ಗಳಿಸಿ ಮಾನವನ ಭೂತ-ವರ್ತಮಾನ-ಭವಿಷ್ಯಗಳನ್ನು ನುಡಿಯಬಲ್ಲೆವು. ನಮ್ಮ ನುಡಿಯಲ್ಲಿ ದೋಷ ಹಣುಕಿದರೆ ನಾವು ಅನುಭಾವೋಕ್ತಿಗಳನ್ನು ಅರ್ಥವಿಸುವುದರಲ್ಲಿ ಎಡಗಿದ್ದೇವೆಂದು ಅರ್ಥ. ಏಕೆಂದರೆ ಆ ಉಕ್ತಿಗಳು—ಅಂದರೆ ಭಗವದ್ವಾಣಿಗಳು—ಶಾಶ್ವತ ಸತ್ಯಗಳು, ಎಂದೂ ತಪ್ಪಾಗುವ ಸಂಭವವಿಲ್ಲ.

ಇವೆಲ್ಲ ಗಹನ ಪದಪುಂಜಗಳ ಸರಳ ಅರ್ಥವಿದು : ನಂಬಿಕೆ, ಪರಮಾತ್ಮನ ಬಗ್ಗೆ ನಂಬಿಕೆ, ಸೃಷ್ಟಿಕರ್ತನ ಅಪಾರ ಸಾಮರ್ಥ್ಯದ ಬಗ್ಗೆ ನಂಬಿಕೆ, ನನ್ನ ಅಲ್ಪತ್ವದ ಬಗ್ಗೆ ನಂಬಿಕೆ! ಈ ಧಾಟಿಯಲ್ಲಿ ಸಾಗಿದರೆ ತಿಳಿಯುವ ಸಂಗತಿಗಳಿವು :

* ಭಗವಂತನ ಲೀಲಾ ಸೃಷ್ಟಿ ಈ ವಿಶ್ವ.
* ಮಾನವ ಆ ಭಗವಂತನ ಪ್ರತಿಬಿಂಬ.
* ನೈಸರ್ಗಿಕ ಘಟನಾವಳಿಗಳು ಭಗವಂತನ ಇಂಗಿತಗಳ ಪ್ರತೀಕಗಳು.
* ಅನುಭಾವಿಗಳು, ದೇವಮಾನವರು, ಸ್ಫೂರ್ತಿದೀಪ್ತರು ಮೊದಲಾದ ಮಹಾಮಹಿಮರು ಧರೆಯಲ್ಲಿ ಭಗವಂತನ ಮುಖವಾಣಿಗಳು.

* ಈ ಮಹಾಮಹಿಮರು ಧೃತಿ ಇಳಿಸಿದ ಭಗವದ್ವಾಣಿಗಳೇ ಧರ್ಮಗ್ರಂಥಗಳು, ಶಾಸ್ತ್ರಪ್ರಕಾರಗಳು, ಸ್ಫೂರ್ತಿದೀಪ್ತ ಉದ್ಗಾರಗಳು ಮುಂತಾದ ಅಪೌರುಷೇಯಗಳು—ಸಮಗ್ರವಾಗಿ ಅನುಭಾವವಾಙ್ಮಯ.

ಅನುಭಾವವಾಙ್ಮಯದ ಅಪೌರುಷೇಯತ್ವ, ಸಾರ್ವಕಾಲಿಕತೆ ಮತ್ತು ಋಜುತ್ವ ಪ್ರಶ್ನಾತೀತ—simply not negotiable ! ಶ್ರದ್ಧಾಭಕ್ತಿ ಸಹಿತ ಆ ವಾಙ್ಮಯವನ್ನು ಸ್ವೀಕರಿಸಿ ಅನುಷ್ಠಾನಿಸುವುದೊಂದೇ ಮಾನವ ನಿರ್ವಹಿಸಬಹುದಾದ ಕರ್ತವ್ಯ.

ಮಹತಃ ಪರಮ ವ್ಯಕ್ತಮವ್ಯಕ್ತಾತ್ಪುರುಷಃ ಪರಃ
ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾ ಸಾಪರಾಗತಿಃ
ಏಷ ಸರ್ವೇಷುಭೂತೇಷು ಗೂಢೋತ್ಮಾ ನ ಪ್ರಕಾಶತೇ
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ
ಕಠೋಪನಿಷತ್ತು ೧-೩-೧೧,೧೨

ಮಹದಾತ್ಮದ ಆಚೆಗೆ ಶ್ರೇಷ್ಠವಾದ ಅವ್ಯಕ್ತವು, ಅದರಾಚೆಗೆ ಶ್ರೇಷ್ಠ ಪುರುಷನು. ಪುರುಷನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಅದೇ ಕಟ್ಟ ಕಡೆಯ ಅತ್ಯಂತ ಶ್ರೇಷ್ಠವಾದ ಪರಮಗತಿಯು. ಸಕಲ ಭೂತಗಳಲ್ಲಿಯೂ ಗೂಢವಾಗಿರುವ ಆ ಆತ್ಮನು ಪ್ರಕಟನಾಗುವುದಿಲ್ಲ. ಆದರೆ ಅವನು ಸೂಕ್ಷ್ಮ ದರ್ಶಿಗಳ ಸೂಕ್ಷ್ಮ ಹಾಗೂ ತೀಕ್ಷ್ಣಬುದ್ಧಿಗೆ ದೃಗ್ಗೋಚರನಾಗುವನು. (ರಂ.ರಾ. ದಿವಕಾರರ ಅನುವಾದ)

P.D.Auspensky in *A New Model of the Universe* (page 11) writes : The idea of a knowledge which surpasses all ordinary human knowledge, and is inaccessible to ordinary people, but which exists somewhere and belongs to somebody, permeates the whole history of thought of mankind from the most remote periods. And according to certain memorials of the past, a knowledge quite different from ours formed the essence and content of human thought at those times when, according to other

opinions, men differed very little, or did not differ at all, from animals.

ಮಾನವನ ಸಮಸ್ತ ಸಾಮಾನ್ಯ ಜ್ಞಾನವನ್ನೂ ಮೀರಿರುವ ಮತ್ತು ಸಾಮಾನ್ಯ ಜನರಿಗೆ ಅಪ್ರವೇಶ್ಯವಾಗಿರುವ, ಆದರೆ ಎಲ್ಲಿಯೋ ಅಸ್ತಿತ್ವದಲ್ಲಿದ್ದು ಯಾರಿಗೋ ಸೇರಿರುವ, ಒಂದು ಜ್ಞಾನದ ಬಗೆಗಿನ ಭಾವನೆ ಅತ್ಯಂತ ಪ್ರಾಚೀನ ದಿನಗಳಿಂದಲೂ ಮಾನವಚಿಂತನೆಯ ಪೂರ್ತಿ ಇತಿಹಾಸವನ್ನು ಹಾಸುಹೊಕ್ಕಾಗಿ ಪಸರಿಸಿದೆ. ಅಲ್ಲದೇ ಗತಯುಗಗಳ ಕೆಲವು ಸ್ಮಾರಕಗಳ ಪ್ರಕಾರ ನಮ್ಮ ಜ್ಞಾನಕ್ಕಿಂತ ತೀರ ಬೇರೆಯದೇ ಆದ ಒಂದು ಜ್ಞಾನ ಆ ದಿನಗಳಂದು ಮಾನವ ಚಿಂತನೆಯ ಸಾರವೂ ಹೂರಣವೂ ಆಗಿತ್ತು. ಇತರ ಅಭಿಪ್ರಾಯಗಳ ಪ್ರಕಾರ ಮಾನವ ಅಂದು ಪ್ರಾಣಿಗಳಿಗಿಂತ ಅತ್ಯಲ್ಪ ಮಾತ್ರ ಭಿನ್ನನಾಗಿದ್ದ, ಅಥವಾ ಭಿನ್ನನಾಗಿಯೇ ಇರಲಿಲ್ಲ.

ಹಿರಿ ಹೆಸರು, ಘನಗ್ರಂಥ, ಪಾಮರರಿಗೆ (?) ಕಗ್ಗಂಟು. ತೂಕವಾದ ಭಾಷೆ. ಆದರೆ ಭಾವನೆ ? ಇಲ್ಲದ ಯುಗದ ಬಗೆಗಿನ ಸಲ್ಲದ ಚಿಂತನೆಗಳನ್ನು ಸ್ಪಷ್ಟವಲ್ಲದ ಭಾಷೆಯಲ್ಲಿ ತುಂಬಿದರೆ ಅಥವಾ ಗಿಡಿದರೆ ಅಂಥ ಲೇಖನ/ಗ್ರಂಥ 'ಸಾಮಾನ್ಯ ಜನರಿಗೆ ಅಪ್ರವೇಶ್ಯ'ವಾದೀತು. ಅಸ್ಪಷ್ಟತೆಯೇ ವಿದ್ವತ್ತಿನ ಲಕ್ಷಣವೆಂದಾದರೆ ಅದು ಆಕರಗ್ರಂಥವೂ ಆದೀತು. ಆದರೆ ಅಂತಿಮವಾಗಿ ಅಲ್ಲಿ ಉಳಿಯುವುದೇನು ? ಜಳ್ಳು ! ಈ ಜಳ್ಳನ್ನು ಕಾಳಾಗಿಸಲು ಅಸಂಖ್ಯ ವರಿಸೆಗಳು !

## ಭವಿಷ್ಯವಾಚನದ ಆಕರ

ಊಹನಾಮಾರ್ಗದಲ್ಲಿ ನಡೆಯುತ್ತ ಭವಿಷ್ಯವಾಚನಗೈಯುವ ಎಲ್ಲ ಭವಿಷ್ಯವಾಚಕರ ಅಂತಿಮ ಆಕರ ಮತ್ತು ಸೆಲೆ ಅನುಭಾವ ವಾಙ್ಮಯ. ಮತ ಧರ್ಮಗಳ ಆಕರವೂ ಇದೇ. ಈ ಕಾರಣದಿಂದಲೇ ಭವಿಷ್ಯವಾಚನ (ಫಲ ಜ್ಯೋತಿಷ್ಯ) ಎಂದೂ ಖಗೋಳವಿಜ್ಞಾನದ ಅಥವಾ ಇತರ ಯಾವುದೇ ವಿಜ್ಞಾನಪ್ರಕಾರದ ಘಟಕವಾಗಿ ಬೆಳೆಯಲಿಲ್ಲ. ಕಾರ್ಯ-ಕಾರಣ ಸಂಬಂಧಾನ್ವೇಷಣೆಯಾಗಲೀ ಪ್ರಾಯೋಗಿಕ ಸಾಧನಾಮಂಡನೆಯಾಗಲೀ ಇದರ ಅಸ್ತ್ರಗಳಲ್ಲ. ಸಾಧ್ಯವೂ ಆಗದು.

ಹೀಗೆ ಫಲಜ್ಯೋತಿಷ್ಯ ವಿಜ್ಞಾನೇತರ ಚಿಂತನ ಪ್ರಕಾರವಾಗಿ ಬೆಳೆದು ಅಭಿವರ್ಧಿಸಿತು. ನೈಸರ್ಗಿಕ ಘಟನೆಗಳ ಪೈಕಿ ಇದರ ಪ್ರಥಮ ಲಕ್ಷ್ಯ ಆಕಾಶ

ದತ್ತ—ಅಂದರೆ ನಕ್ಷತ್ರಲೋಕದಲ್ಲಿಯ ವಿದ್ಯಮಾನಗಳತ್ತ—ಹರಿಯಿತು. ಆಗ ತಿಳಿದದ್ದೇನು ?

* ಸ್ಥಿರಭೂಮಿ ಖಗೋಳಕೇಂದ್ರದಲ್ಲಿ ನಿಂತಿದೆ.

* ಖಗೋಳದ ನೀಲ ಮಾಡಿಗೆ ಶಾಶ್ವತ ನಕ್ಷತ್ರಚಿತ್ರಗಳು ಲಗತ್ತಾಗಿವೆ—ಅದೊಂದು ನಕ್ಷತ್ರಚಿತ್ರಾಂಕಿತ ಪರದೆಯೋ ಎಂಬಂತೆ.

* ಪರದೆಯ ಮೇಲೆ ಏಳು ಮುಖ್ಯ ಕಾಯಗಳು ಸರಿಯುತ್ತಿವೆ: ಸೂರ್ಯ ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ.

* ಇವುಗಳ ಕಕ್ಷೆಗಳು ಪರದೆಯಲ್ಲಿ ಇಕ್ಕಟ್ಟಾದ ಒಂದು ಪಟ್ಟಿಗೆ ಸೀಮಿತ ವಾಗಿವೆ. ಇದು ರಾಶಿಚಕ್ರ.

* ಬಿಡಿಬಿಡಿಯಾಗಿ ಈ ಕಾಯಗಳ ಚಲನವಲನಗಳನ್ನೂ ಪರಿಸರದಲ್ಲಿಯ ಸ್ಪಂದನಗಳನ್ನೂ ತಾಳೆಹಾಕಿದಾಗ ಹಲವಾರು ಸಂಬಂಧಗಳು ಮತ್ತು ಪ್ರರೂಪ ಗಳು ಬೆಳಕಿಗೆ ಬಂದುವು :

ಸೂರ್ಯನ ದೈನಂದಿನ ಪೂರ್ವ-ಪಶ್ಚಿಮ ಯಾತ್ರೆ ಮತ್ತು ಹಗಲು-ಇರುಳು ಗಾಲಿಯ ಉರುಳಾಟ.

ಅಮಾವಾಸ್ಯೆಯಿಂದ ಮುಂದಿನ ಅಮಾವಾಸ್ಯೆ ತನಕ ಚಂದ್ರನ ವಿವಿಧ ಭಂಗಿಗಳ ಪ್ರದರ್ಶನ ಮತ್ತು ರಾಶಿಚಕ್ರದಲ್ಲಿ ಸೂರ್ಯನ ನಿರ್ದಿಷ್ಟ ಪರ್ಯಟನೆ—ತಿಂಗಳು-ಸಂಕ್ರಮಣ ಸಂಬಂಧ.

೧೨ ತಿಂಗಳುಗಳು ಸಂದಾಗ ಆಕಾಶದಲ್ಲಿ ಹಿಂದಿನ ನಕ್ಷತ್ರಚಿತ್ರಗಳ ಪ್ರದರ್ಶನ—ತಿಂಗಳು-ವರ್ಷ ಸಂಬಂಧ.

ಋತುಚಕ್ರದ ಉರುಳಾಟ ಮತ್ತು ವರ್ಷದ ಸರಿತ ಇವುಗಳ ನಡುವಿನ ಅವಿಭಾಜ್ಯಕೊಂಡಿ.

ಸೂರ್ಯ ಮತ್ತು ಚಂದ್ರ ಎರಡು ನಿರ್ದಿಷ್ಟ ನೆಲೆಗಳಲ್ಲಿ ಎದುರುಬದಿ ರಾಗಿರುವಾಗ ಚಂದ್ರಗ್ರಹಣವೂ ಯಾವುದೇ ಒಂದರಲ್ಲಿ ಸಂಗಮಿಸಿರುವಾಗ ಸೂರ್ಯಗ್ರಹಣವೂ ಸಂಭವಿಸುವ ವೈಚಿತ್ರ್ಯ. ಈ ನೆಲೆಗಳೇ ರಾಹು ಮತ್ತು ಕೇತು. ಮೇಲೆ ಹೆಸರಿಸಿರುವ ಏಳು ಚರಕಾಯಗಳ ಯಾದಿಗೆ ರಾಹು ಮತ್ತು ಕೇತು ಕೂಡ ದಾಖಲಾಗಿ ನವಗ್ರಹಗಳು ಒದಗಿದುವು.

ಈ ತೆರನಾಗಿ ಪ್ರಾಚೀನ ದಿನಗಳಲ್ಲಿ ಗೋಚರ ಜ್ಞಾನ ಘನೀಭವಿಸಿ—ಅಂದರೆ ಕಂಡ ದೃಶ್ಯಕ್ಕೆ ತಾರ್ಕಿಕ ಅರ್ಥ ಅಥವಾ ವಿವರಣೆ ನೀಡುವ ಚಿಂತನ

ಪ್ರಕಾರ ಮೈದಳೆದು—ಖಗೋಳವಿಜ್ಞಾನದ ಮೊದಲ ಪಂಕ್ತಿಗಳು ದಾಖಲಾದುವು. ಮುಂದಿನ ಹಂತಗಳಿವು :

* ರಾಶಿಚಕ್ರವನ್ನು ೧೨ ಸಮವಿಭಾಗಗಳಾಗಿ ವಿಂಗಡಿಸಿ (ವರ್ಷದಲ್ಲಿ ೧೨ ತಿಂಗಳುಗಳಿದ್ದುದರಿಂದ ಸಂಖ್ಯೆ ೧೨ಕ್ಕೆ ಪ್ರಾಮುಖ್ಯ ಬಂದಿತು) ಈ ವಿಭಾಗಗಳಲ್ಲಿಯ ಶಾಶ್ವತ ನಕ್ಷತ್ರಚಿತ್ರಗಳಿಗೆ ಸೂರ್ಯ ಸರಿಯುತ್ತಿದ್ದ ದಿಶೆಯಲ್ಲಿ (ಪಶ್ಚಿಮ-ಪೂರ್ವ) ಅಷ್ಟು ಹೆಸರುಗಳನ್ನು ನೀಡಿದರು : ಮೇಷ, ವೃಷಭ, ಮಿಥುನ, ಕರ್ಕಟ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ, ಮೀನ. ಇವು ರಾಶಿಚಕ್ರವನ್ನು ವ್ಯಾಖ್ಯಿಸಿ ನಿರ್ಧರಿಸುವ ದ್ವಾದಶ ರಾಶಿಗಳು.

* ಖಗೋಳದಲ್ಲಿ ಗುರುತಿಸಬಹುದಾದ ಈ ನಕ್ಷತ್ರಖಚಿತ ಡಾಬುವನ್ನು ಕಾಗದದಲ್ಲಿ ಸೂಚಿಸಲು ನಿರ್ದಿಷ್ಟ ಚಿತ್ರವನ್ನು ರೂಪಿಸಿದರು : ೧೨ ಮನೆಗಳಿರುವ ಚೌಕ. ಈ ಚಿತ್ರದ ಹೆಸರು ಗ್ರಹಕುಂಡಲಿ. ಹೀಗೆ ಆಕಾಶದಲ್ಲಿ ರಾಶಿಚಕ್ರ, ಪಶ್ಚಿಮ-ಪೂರ್ವದಿಶಾ ಗಮನ ; ಕಾಗದದಲ್ಲಿ ಗ್ರಹಮಂಡಲಿ, ಪ್ರದಕ್ಷಿಣ ದಿಶಾಗಮನ.

| ಮೀನ | ಮೇಷ | ವೃಷಭ | ಮಿಥುನ |
|---|---|---|---|
| ಕುಂಭ | | | ಕರ್ಕಟ |
| ಮಕರ | | | ಸಿಂಹ |
| ಧನು | ವೃಶ್ಚಿಕ | ತುಲಾ | ಕನ್ಯಾ |

ಚಿತ್ರ ೩. ರಾಶಿಚಕ್ರವನ್ನು ಪ್ರತೀಕಿಸುವ ಚಿತ್ರ. ಪ್ರದಕ್ಷಿಣ ದಿಶೆ (ಮೇಷ–ವೃಷಭ........ಮೀನ-ಮೇಷ) ಮಾರ್ಗ ಚಲನೆಯನ್ನು ಸೂಚಿಸುತ್ತದೆ. ಆಕಾಶದಲ್ಲಿ ಇದು ಪಶ್ಚಿಮ–ಪೂರ್ವ ದಿಶಾಗಮನ.

ಅಪ್ರದಕ್ಷಿಣ ದಿಶೆ (ಮೇಷ–ಮೀನ......ವೃಷಭ–ಮೇಷ) ವಕ್ರಚಲನೆ ಯೆನ್ನು ಸೂಚಿಸುತ್ತದೆ. ಆಕಾಶದಲ್ಲಿ ಇದು ಪೂರ್ವ–ಪಶ್ಚಿಮ ದಿಶಾ ಗಮನ. ಚಂದ್ರನ ಸ್ಥಾನವನ್ನು ಪ್ರತಿ ರಾತ್ರಿಯೂ ಒಂದೇ ಹೊತ್ತಿಗೆ ಗುರುತಿಸಿ ನೋಡಿ: ಚಂದ್ರನದು ಮಾರ್ಗಚಲನೆ ಎಂದು ತಿಳಿಯುತ್ತದೆ. ಸೂರ್ಯನದೂ ಅಷ್ಟೆ. ಆದರೆ ಇದನ್ನು ಪರೋಕ್ಷವಾಗಿ ತಿಳಿಯ ಬಹುದು ಮಾತ್ರ. ಮಿಕ್ಕವುಗಳಿಗೆ (ಬುಧ, ಶುಕ್ರ, ಕುಜ, ಗುರು, ಶನಿ) ಉಭಯ ಚಲನೆಗಳೂ ಇವೆ : ಅಲ್ಲದೇ ಹಲವು ಕಾಲ ನಿಶ್ಚಲವಾಗಿರುವ ಸ್ಥಿತಿಯೂ ಇದೆ—ಸ್ತಬ್ಧತೆ.

* ಪಶ್ಚಿಮ–ಪೂರ್ವ (ಪ್ರದಕ್ಷಿಣ) ದಿಶಾಗಮನ ಕಾಯಕ್ಕೆ ಸಹಜವಾದ ಚಲನೆ ಎಂದು ಅಂಗೀಕರಿಸಿ (ಅಂದರೆ ವಾಸ್ತವತೆಗೆ ಶರಣಾಗಿ) ಅದನ್ನು ಮಾರ್ಗಚಲನೆ ಯೆಂದು ಕರೆದರು. ಆದ್ದರಿಂದ ವಿರುದ್ಧ ದಿಶಾಗಮನವನ್ನು (ಪೂರ್ವ-ಪಶ್ಚಿಮ ಅಥವಾ ಅಪ್ರದಕ್ಷಿಣ ದಿಶಾಗಮನ) ವಕ್ರಚಲನೆ ಎಂದು ವಿವರಿಸಿದರು. ಸೂರ್ಯ ಮತ್ತು ಚಂದ್ರ ಸದಾ ಮಾರ್ಗಚಲನೆಯನ್ನು ಮಾತ್ರ, ಅಂತೆಯೇ ರಾಹು ಕೇತು ಸದಾ ವಕ್ರಚಲನೆಯನ್ನು ಮಾತ್ರ ಪ್ರದರ್ಶಿಸುತ್ತವೆ. ನವಗ್ರಹಗಳ ಪೈಕಿ ಉಳಿದ ಐದು (ಕುಜ, ಬುಧ, ಗುರು, ಶುಕ್ರ, ಶನಿ) ಉಭಯ ಚಲನೆಗಳನ್ನೂ ಪ್ರದರ್ಶಿಸುತ್ತವೆ, ಅಲ್ಲದೇ ಕೆಲವೊಮ್ಮೆ ಚಲಿಸದೆ ಸ್ತಬ್ಧ ಸ್ಥಿತಿಯಲ್ಲಿರುವುದೂ ಉಂಟು.

ಶತಮಾನಪರ್ಯಂತ ವೀಕ್ಷಣೆಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ವಿಶ್ಲೇಷಿಸಿ ನವಗ್ರಹಗಳ ಚಲನವಲನಗಳನ್ನು ಕರಾರುವಾಕ್ಕಾಗಿ ವಿವರಿಸುವ ಗಣಿತಸೂತ್ರಗಳನ್ನು ನಿಗಮಿಸಿದರು. ಅಂದರೆ ನವಗ್ರಹಗಳು ಈಗ ಗಣಿತ ಸೂತ್ರಗಳಿಂದ ಬಂಧಿಸಲ್ಪಟ್ಟವು. ಈ ಸೂತ್ರಗಳನ್ನು ಆಧರಿಸಿ ಪ್ರತಿಯೊಂದರ ಭೂತ, ವರ್ತಮಾನ ಮತ್ತು ಭವಿಷ್ಯ ಸ್ಥಾನಗಳನ್ನು ನಿರ್ಧರಿಸುವುದು ಸಾಧ್ಯ ವಾಯಿತು. ಹೀಗೆ ನವಗ್ರಹಗಳ ಚಲನೆಯಲ್ಲಿಯ ಅರಾಜಕತೆಯಲ್ಲಿ ಕ್ರಮ ವನ್ನು ಮತ್ತು ಪ್ರರೂಪವನ್ನು ಗುರುತಿಸಿದಾಗ.........

.........ಆ ಭಗವಂತನ ಸಂಕಲ್ಪದ ಕಿಂಚಿತ್ತು ದರ್ಶನ ಒದಗಿತು ! ಆತನ ಚಿತ್ರಲಿಪಿಯನ್ನೂ ಗ್ರಹಸಂಕೇತವನ್ನೂ ಓದುವ ಅಲ್ಪ ಸಾಮರ್ಥ್ಯ ಮಾನವನಿಗೆ ಸಿದ್ಧಿಸಿತು.

ಆಕಾಶದಲ್ಲಿ ನವಗ್ರಹಗಳ ಸ್ಥಾನಗಳು ಕ್ಷಣದಿಂದ ಕ್ಷಣಕ್ಕೆ ಬದಲಾಗು

ತ್ತವೆ. ಈ ವ್ಯತ್ಯಾಸಗಳ ಗತಿವೃತ್ತಾಂತ ತಿಳಿದಿದೆ. ಆದ್ದರಿಂದ ಗ್ರಹಕುಂಡಲಿ ಯಲ್ಲಿ ಅನುರೂಪ ಚಿತ್ರಣ ಮಾಡುವುದು ಸುಲಭ. ಯಾವುದೇ ವರ್ಷದ ಯಾವುದೇ ದಿನದ ಯಾವುದೇ ಕ್ಷಣದಲ್ಲಿ ನವಗ್ರಹವಿತರಣೆ ಹೇಗಿರುತ್ತದೆ ? ಆ ಮುಹೂರ್ತದ ಗ್ರಹ ಕುಂಡಲಿ ನೋಡಿದರೆ ಅದು ತಿಳಿಯುತ್ತದೆ. ಭವಿಷ್ಯದಲ್ಲಿ ಸಂಭವಿಸಲಿರುವ ಗ್ರಹಣ, ಅಮಾವಾಸ್ಯೆ, ಸಂಕ್ರಮಣ, ಅಷ್ಟಗ್ರಹಯೋಗ ಮುಂತಾದ ಆಕಾಶ ಘಟನೆಗಳನ್ನು ಇಂದೇ ಕರಾರುವಾಕ್ಕಾಗಿ ಕಣಿಸುಡಿಯ ಬಹುದು. ಇದು ಶುದ್ಧಗಣಿತ — ನಿಸರ್ಗಕ್ಕೆ ಬರೆದ ವ್ಯಾಖ್ಯಾನ. ಇಲ್ಲಿ ದೈವಿಕವಾದದ್ದು ಏನೂ ಇಲ್ಲ.

ಇದಿಷ್ಟು ಖಗೋಳವಿಜ್ಞಾನದಿಂದ (ಭಾರತೀಯ ಕ್ರಮದಲ್ಲಿ ಇದನ್ನು ಜ್ಯೋತಿಷ್ಯಶಾಸ್ತ್ರ ಅಥವಾ ಜ್ಯೋತಿರ್ವಿಜ್ಞಾನ ಎನ್ನುತ್ತೇವೆ)ಅನುಗತವಾಗುವ ವಾಸ್ತವ ಸಂಗತಿ. ಇಲ್ಲಿ ಯಾವುದೇ ಬಗೆಯ ದೈವಿಕತೆಗೆ, ಪವಾಡಕ್ಕೆ, ಅನು ಭಾವಕ್ಕೆ ಅಥವಾ ವಿಜ್ಞಾನಾತೀತ ಪ್ರಭಾವಕ್ಕೆ ಪ್ರವೇಶವಿಲ್ಲ.

## ಜಾತಕ ಎಂದರೇನು ?

ವ್ಯಕ್ತಿಯ ಜನನ ಕ್ಷಣದ ಗ್ರಹಕುಂಡಲಿಯೇ ಆತನ ಜಾತಕ. ಆ ದಿನಾಂಕದಂದು ಆ ಕ್ಷಣದಲ್ಲಿ ನವಗ್ರಹಗಳು ಸ್ಥಿರನಕ್ಷತ್ರಚಿತ್ರಾಂಕಿತ ಪರದೆಯ ಮೇಲೆ ಹೇಗೆ ವಿತರಣೆಗೊಂಡಿದ್ದವೆಂಬುದನ್ನು ತೋರಿಸುವ ಸ್ತಬ್ಧ ಪ್ರತಿಬಿಂಬ ಇದು. ಇದೊಂದು ವೈಜ್ಞಾನಿಕ ದಾಖಲೆ- ವ್ಯಕ್ತಿಯ ಛಾಯಾಚಿತ್ರದಂತೆ ಅಥವಾ ಬೆರಳಚ್ಚು ಮುದ್ರೆಗಳಂತೆ.

ಇದರ ರಚನೆ ಬಲು ಸುಲಭ. ಆಧುನಿಕ ದೃಕ್ಸಿದ್ಧಾಂತ ಪಂಚಾಂಗ (ಉದಾಹರಣೆಗೆ 'ವೈಜಯಂತೀ ಪಂಚಾಂಗ' ಸಂಪಾದಕರು : ಯಮರ್ಜುಂಜ ಭೀಮ ಜೋಯಿಸ) ತೆಗೆದುಕೊಂಡು ಅದರಿಂದ ವ್ಯಕ್ತಿಯ ಜನನ ದಿನಾಂಕ ಕುರಿತ ಮಾಹಿತಿ ಪಡೆಯಬೇಕು. (ಇಂದು ಚಲಾವಣೆಯಲ್ಲಿ ಸಾಧಾರಣವಾಗಿ ಮೂರು ಬಗೆಯ ಪಂಚಾಂಗಗಳಿವೆ : ಸೂರ್ಯಸಿದ್ಧಾಂತ ಪಂಚಾಂಗ, ದೃಕ್ಸಿದ್ಧಾಂತ ಪಂಚಾಂಗ, ಸೂರ್ಯ-ದೃಕ್ಸಿದ್ಧಾಂತ ಮಿಶ್ರ ಪಂಚಾಂಗ. ಪ್ರಾಚೀನ ಗಗನಕ್ಕೆ ಹಿಡಿದ ಕನ್ನಡಿ ಸೂರ್ಯಸಿದ್ಧಾಂತ, ಆಧುನಿಕ ಗಗನಕ್ಕೆ ಹಿಡಿದ ಕನ್ನಡಿ ದೃಕ್ಸಿದ್ಧಾಂತ. ಆದ್ದರಿಂದ ಆಧುನಿಕ ಯುಗದಲ್ಲಿ ಸೂರ್ಯಸಿದ್ಧಾಂತಕ್ಕೆ

ಐತಿಹಾಸಿಕ ಮಹತ್ತ್ವದ ಹೊರತಾಗಿ ಬೇರೆ ಯಾವ ಹಿರಿಮೆಯೂ ಇಲ್ಲ. ಹಾಗಿದ್ದರೂ ಅಂಥ ಪರಂಪರೆಯ ಕ್ರೂರ ಸಂಪ್ರದಾಯಗಳಿಗೆ ವಿನೀತ ದಾಸರಾಗಿರುವ ಮೂಢಮತಿಗಳು ಸೂರ್ಯಸಿದ್ಧಾಂತವನ್ನು ಧಾರ್ಮಿಕ ವಿಧಿಗಳಿಗೂ ದೃಕ್ಸಿದ್ಧಾಂತವನ್ನು ಗೋಚರ ವಿದ್ಯಮಾನಗಳಿಗೂ ಅನ್ವಯಿಸಿ ಸೂರ್ಯಸಿದ್ಧಾಂತ–ದೃಕ್ಸಿದ್ಧಾಂತ ಸಮನ್ವಯ ಸಾಧಿಸಿದ್ದೇವೆಂದು ಸ್ವವಂಚನೆ ಮಾಡಿಕೊಳ್ಳುವುದು ಬಹುತೇಕ ರೂಢಿಯಲ್ಲಿದೆ !)

ಉದಾಹರಣೆಗೆ ಶಿಶು ಜನನ ೨೧–೩–೧೯೬೩ ಪೂರ್ವಾಹ್ಣ ೪ ಗಂಟೆ ೫೦ ಮಿನಿಟಿಗೆ ಸರಿಯಾಗಿ (ಇದನ್ನು ಅಷ್ಟೊಂದು ಕರಾರುವಾಕ್ಕಾಗಿ ನಿರ್ಣಯಿಸುವುದು ಸಾಧ್ಯವೇ !) ಮೈಸೂರಿನಲ್ಲಿ ಆಯಿತೆಂದು ಭಾವಿಸೋಣ. ದೃಕ್ಸಿದ್ಧಾಂತ ಪಂಚಾಂಗದ ಪ್ರಕಾರ ಅದೇ ಹಿಂದಿನ ಹುಣ್ಣಿಮೆ ಮತ್ತು ಮುಂದಿನ ಅಮಾವಾಸ್ಯೆ ಸಂದರ್ಭಗಳಲ್ಲಿ ನವಗ್ರಹವಿತರಣೆಗಳು ಹೀಗಿವೆ :

| | | | |
|---|---|---|---|
| ಶು | | ಕೇ | ಕು |
| ರ ಬು ಶ | ೮-೩-೧೯೬೩ ಹುಣ್ಣಿಮೆ | | |
| | | | ಚಂ |
| | ರಾ | | ಗು |

ಚಿತ್ರ ೪. ಈ ಗ್ರಹಕುಂಡಲಿಗಳಲ್ಲಿಯ ಮನೆಗಳು ಯಾವ ಯಾವ ರಾಶಿಗಳನ್ನು ಪ್ರತೀಕಿಸುತ್ತವೆ ಎಂಬುದನ್ನು ಚಿತ್ರ ೩ರಲ್ಲಿ ಕಾಣಿಸಿದೆ. ಅಂದರೆ ಮೇಲು ಸಾಲಿನ ಒಂದನೆಯ ಮನೆ ಮೀನ; ಎರಡನೆಯದು ಮೇಷ ಇತ್ಯಾದಿ. ೮–೩–೧೯೬೩ರಂದು ಸೂರ್ಯ (ರವಿ) ಕುಂಭ

| | | | |
|---|---|---|---|
| ರ ಚಂ ಶು | | ಕೇ | ಕು |
| ಬು ಶ | ೨೩-೩-೧೯೬೩ ಅಮಾವಾಸ್ಯೆ | | |
| | | | |
| | | | ಗು |

ರಾಶಿಯಲ್ಲಿಯೂ ಚಂದ್ರ ಸಿಂಹರಾಶಿಯಲ್ಲಿಯೂ ಇರುವುವು. ಆಕಾಶ ದಲ್ಲಿ ಇವು (ವೀಕ್ಷಕನನ್ನು ಕುರಿತಂತೆ) ಎದುರುಬದಿರು ರಾಶಿಗಳು—ಎಂದೇ ಅಂದು ಹುಣ್ಣಿಮೆ. ೨೩-೩-೧೯೬೩ರಂದು ಸೂರ್ಯ (ರವಿ) ಚಂದ್ರ ಎರಡೂ ಮೀನರಾಶಿಯಲ್ಲಿ ಸಂಗಮಿಸುವುವು. ಆದ್ದರಿಂದ ವೀಕ್ಷಕ ಇವನ್ನು ಒಂದೇ ದಿಶೆಯಲ್ಲಿ ಕಾಣುತ್ತಾನೆ. ಆಗ ಸೂರ್ಯ-ವಿಮುಖ (ಅಥವಾ ಬೆಳಗದ) ಭಾಗ ವೀಕ್ಷಕನತ್ತ ಮುಖಮಾಡಿರುತ್ತದೆ—ಎಂದೇ ಅಂದು ಅಮಾವಾಸ್ಯೆ.

ನವಗ್ರಹಗಳ ದೈನಂದಿನ ಗತಿವಿವರಗಳು ಪಂಚಾಂಗದಲ್ಲಿ ಈ ಗ್ರಹ ಕುಂಡಲಿಗಳ ಕೆಳಗೆ ಮುದ್ರಣವಾಗಿವೆ. ಇವನ್ನು ಉಪಯೋಗಿಸಿ ಕೆಲವು ಸರಳ ಗಣನೆಗಳನ್ನು ಮಾಡಿ ಶಿಶುವಿನ ಜಾತಕವನ್ನು ತಯಾರಿಸಬಹುದು. ಹೀಗೆ ಜಾತಕಲೇಖನ ಒಂದು ಯಾಂತ್ರಿಕ ವಿಧಿ: ಲಭ್ಯ ಮಾಹಿತಿಗೆ ಸಿದ್ಧ ಸೂತ್ರ ಅನ್ವಯಿಸಿ ಫಲಿತಾಂಶ ಪಡೆಯುವ ಕ್ರಿಯೆ (ಚಿತ್ರ ೫).

ಉದಾಹರಣೆಗೆ—

ಲಭ್ಯ ಮಾಹಿತಿ : ವಾಹನದ ವೇಗ = ಗಂಟೆಗೆ ೫೦ ಕಿಮೀ

ಬೇಕಾದ ಫಲಿತಾಂಶ : ೩ ಗಂಟೆ ೪೨ ಮಿನಿಟುಗಳ ತರುವಾಯ ವಾಹನ ಎಲ್ಲಿರುವುದು ? ಸಿದ್ಧ ಸೂತ್ರ : → ಪು ೫೧ ಕೆಳಭಾಗ

೪

| | | | |
|---|---|---|---|
| ರ ಶು | | ಕೇ | ಕು |
| ಲ ಚಂ ಬು ಶ | ೨೧-೩-೧೯೬೩ ೪-೫೦ ಪೂ ಮೈಸೂರು | | |
| | | | |
| ಯು ನೆ | ರಾ ಪ್ಲೂ | | ಗು |

ಚಿತ್ರ ೫. ದಿನಾಂಕ ೨೧-೩-೧೯೬೩ ಮುಂಜಾನೆ ೪-೫೦ ಗಂಟೆಗೆ ಮೈಸೂರಿನಲ್ಲಿ ಹುಟ್ಟಲಿರುವ ಮಗುವಿನ ಜಾತಕ. (ಈ ಪುಸ್ತಕ ಬರೆದದ್ದು ೧೯೬೨ರಲ್ಲಿ.) ರವಿ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ 'ನವಗ್ರಹ'ಗಳ ಸ್ಥಾನಗಳನ್ನು ( = ರಾಶಿಗಳನ್ನು) ಕಾಣಿಸಿದೆ : ಸೂರ್ಯನದು ಮೀನ, ಚಂದ್ರನದು ಕುಂಭ, ಇತ್ಯಾದಿ. ಯುರೇನಸ್( = ಯು), ನೆಪ್ಚ್ಯೂನ್( = ನೆ) ಮತ್ತು ಪ್ಲೂಟೋ (ಪ್ಲೂ) ಸೌರವ್ಯೂಹದ ಸದಸ್ಯಗ್ರಹಗಳಾಗಿದ್ದರೂ ಇವು ಬರಿಗಣ್ಣಿಗೆ ಕಾಣದಿರುವುದರಿಂದ ಗತಶತಮಾನಗಳ ಜ್ಯೋತಿಷ್ಯ ಮತ್ತು ಫಲಜ್ಯೋತಿಷ್ಯ ಗ್ರಂಥಗಳಲ್ಲಿ ಇವುಗಳ ಬಗ್ಗೆ ಉಲ್ಲೇಖಗಳಿಲ್ಲ. 'ನವಗ್ರಹ'ಗಳ ಸಂಚಾರಪಥಗಳು ರಾಶಿಚಕ್ರದಲ್ಲಿ ನೆಲಸಿರುವುದು ಸರಿಯಷ್ಟೆ. ಈ ಪೈಕಿ ಸೂರ್ಯನ ಪಥಕ್ಕೆ ಕ್ರಾಂತಿವೃತ್ತವೆಂದು ಹೆಸರು. ಇದು ಯಾವುದೇ ಸ್ಥಳದ ಪೂರ್ವದಿಗಂತವನ್ನು ಸಂಧಿಸುವ ಬಿಂದುವಿಗೆ (ಆ ಸ್ಥಳದ) ಲಗ್ನ ( = ಲ) ಎಂದು ಹೆಸರು. ಆದ್ದರಿಂದ ಸ್ಥಳದಿಂದ ಸ್ಥಳಕ್ಕೆ ಲಗ್ನ ಬದಲಾಗುತ್ತದೆ, ಕಾಲದಿಂದ ಕಾಲಕ್ಕೆ 'ನವಗ್ರಹ' ಸ್ಥಾನಗಳು ಬದಲಾಗುತ್ತವೆ. (ಈ ಎರಡನೆಯದಕ್ಕೆ ಉದಾಹರಣೆಯಾಗಿ ಚಿತ್ರ ೩ ಮತ್ತು ೪ರಲ್ಲಿ 'ನವಗ್ರಹ' ವಿತರಣೆಗಳನ್ನು ಹೋಲಿಸಿ

ನೋಡಿ.) ಈಗ, ಪ್ರಸಕ್ತ ಜಾತಕ "ದಿನಾಂಕ ೨೧-೩-೧೯೮೩ ಮುಂಜಾನೆ ೪-೫೦ ಗಂಟೆ, ಮೈಸೂರು" ಎಂಬ ಕಾಲ–ದೇಶ ಕುರಿತದ್ದು. ಇದರಲ್ಲಿ ಲಗ್ನದ ಸ್ಥಾನ ಕುಂಭ. ಅಂದರೆ ಶಿಶುಜನನ ಕ್ಷಣದಲ್ಲಿ ಕುಂಭ ಉದಯಿಸುತ್ತಿದೆ, ಸೂರ್ಯನ ಸ್ಥಾನ ಮೀನವಾದ್ದರಿಂದ ಸ್ವಲ್ಪ ಕಾಲಾನಂತರ (ವಾಸ್ತವವಾಗಿ ೬-೪೧ ಗಂಟೆಗೆ) ಸೂರ್ಯೋದಯ ಆಗುವುದೆಂದರ್ಥ. ಇದೇ ದಿನಾಂಕ ಇದೇ ಕ್ಷಣ ಬೇರೊಂದು ಸ್ಥಳದಲ್ಲಿ ಹುಟ್ಟುವ ಶಿಶುವಿನ ಜಾತಕ ಹೇಗಿರುತ್ತದೆ ? ಅದರಲ್ಲಿ ಲಗ್ನದ ಸ್ಥಾನ ಅಲ್ಲಿಯ ಸೂರ್ಯೋದಯಕ್ಕೆ ಹೊಂದುವಂತೆ ಬೇರೆ ರಾಶಿಗೆ ಸರಿದಿರುತ್ತದೆ. ಇದೇ ದಿನಾಂಕ ಇದೇ ಸ್ಥಳದಲ್ಲಿ, ಆದರೆ ಮುಂಜಾನೆ ೭ ಗಂಟೆಗೆ ಹುಟ್ಟುವ ಶಿಶುವಿನ ಜಾತಕದಲ್ಲಿ ಲಗ್ನದ ಸ್ಥಾನ, ನೀವು ಊಹಿಸಿರುವಂತೆ, ಮೀನ. ಹೀಗೆ ಜಾತಕ ದೇಶ-ಕಾಲ ಕುರಿತಂತೆ ಒಂದು ವಿಶಿಷ್ಟ ವೈಜ್ಞಾನಿಕ ದಾಖಲೆ. ಆದ್ದರಿಂದಲೇ ಅಂದು ಕಡ್ಡಿಕವಡೆಗಳು ಮಾಡುತ್ತಿದ್ದ ಗಣನೆಯನ್ನು ಇಂದು ಗಣಕಗಳು ನಿರ್ವಹಿಸುವುದು ಸಾಧ್ಯವಾಗಿದೆ. ಈ ವೈಜ್ಞಾನಿಕ ಕ್ರಿಯೆಯ ಮುಂದಿನ ಹಂತವಾದ "ಜಾತಕವಾಚನದಿಂದ ಭವಿಷ್ಯ ನಿರೂಪಣೆ" (ಅಂದರೆ ಫಲ ಜ್ಯೋತಿಷ್ಯ) ಮಾತ್ರ ಅವೈಜ್ಞಾನಿಕ, ಅನೈಸರ್ಗಿಕ ಮತ್ತು ಅಪ್ರಾಯೋಗಿಕ.

[ವೇಗ] × [ವೇಳೆ] = [ವಾಹನ ಗಮಿಸಿದ ದೂರ]

೫೦ × ೩.೭ = ೧೮೫

ಉತ್ತರ : ಹೊರಟಲ್ಲಿಂದ ೧೮೫ ಕಿಮೀ ದೂರದಲ್ಲಿರುವುದು

ಇಂಥ ಪ್ರಾಥಮಿಕ ಗಣನೆ ಮಾಡಲು ಯಾವ ಅಂತಃಸ್ಫೂರ್ತಿ ಬೇಡ, ದೈವಾನುಗ್ರಹ ಬೇಡ, ಪವಾಡ ಸಾಮರ್ಥ್ಯವೂ ಬೇಡ.

ಜಾತಕಲೇಖಕನ ವೃತ್ತಿನಾಮ ಜೋಯಿಸನೆಂದು. ಈತ ಖಗೋಳಪಂಡಿತನಾಗಿರಬೇಕಾಗಿಲ್ಲ, ಆಕಾಶಕಾಯಗಳನ್ನು ಗುರುತಿಸಬಲ್ಲವನಾಗಿರಬೇಕಾಗಿಲ್ಲ, ಅವುಗಳ ಬಗ್ಗೆ ಪ್ರಾಥಮಿಕ ಮಾಹಿತಿಗಳನ್ನು ಕೂಡ ತಿಳಿದವನಾಗಿರಬೇಕಾಗಿಲ್ಲ. ತಿಳಿದಿದ್ದರೆ ಆತನ 'ವಿದ್ವತ್ತು' ಅಮೋಘ ಎನ್ನಿಸುತ್ತದೆ ! ಲಭ್ಯ ಮಾಹಿತಿಗಳಿಗೆ ಸಿದ್ಧ ಸೂತ್ರಗಳನ್ನು ಯಾಂತ್ರಿಕವಾಗಿ ಅನ್ವಯಿಸಿ ಜಾತಕ ತಯಾರಿಸುವುದರಲ್ಲಿ

ಆತ ಚಾಕಚಕ್ಯಗಳಿಸಿದವನಾಗಿರಬೇಕು. ಜೋಯಿಸನ ಬಳಿ ಹೋದವರ ಸಾಧಾರಣ ಅನುಭವವೇನು ?

ತನ್ನ ಗಹನ ಕಾರ್ಯಕ್ಕೆ ಆತ ದೈವಿಕ ಪರಿವೇಷ ಬಳಿದಿರುತ್ತಾನೆ. ಶಾಸ್ತ್ರ ಗ್ರಂಥಗಳನ್ನು ಪದೇ ಪದೇ ಪೂಜ್ಯಭಾವದಿಂದ ತಿರುವಿಹಾಕುತ್ತ ಅವುಗಳಿಂದ ನಿಗೂಢ(?) ರತ್ನಗಳನ್ನು ಉತ್ಖನಿಸುವ ದೃಶ್ಯ ಪ್ರದರ್ಶಿಸುತ್ತಾನೆ. ಕಠಿಣ ಮಂತ್ರಗಳನ್ನು ಪಠಿಸಿ ಗ್ರಹನಕ್ಷತ್ರಗಳನ್ನು ಕಕ್ಷೆಗಳಿಗೆ ಆವಾಹಿಸುತ್ತಾನೆ. ಇವೆಲ್ಲ ಮಹಾಮೂಲೀ ವೃತ್ತಿ ಚಮತ್ಕಾರಗಳು : ಚಂದ್ರನನ್ನು ನೋಡಲು ಋಗ್ವೇದ ಕಲಿಯಬೇಕೇ ? ಬಾಳೆಯ ಹಣ್ಣು ತಿನ್ನಲು ಅಥರ್ವಣವೇದ ಜಪಿಸಬೇಕೇ ?

ಇಂದಿನ ಜೋಯಿಸ ಯಾರು ಗೊತ್ತೇ ? ಗಣಕ. ಇದಕ್ಕೆ ಶಿಶುಜನನ ಕ್ಷಣ, ದಿನಾಂಕ ಹಾಗೂ ನೆಲೆ ಊಡಿದರೆ ಮರುಕ್ಷಣವೇ ಇದರಿಂದ ಮುದ್ರಿತ ಜಾತಕಹೊರಬರುತ್ತದೆ.ಆದ್ದರಿಂದ ಜಾತಕ ಲೇಖನ ಒಂದು ವೈಜ್ಞಾನಿಕ ಕ್ರಿಯೆ.

## ಫಲಜ್ಯೋತಿಷ್ಯ

ಜಾತಕವನ್ನು ಪರಾಂಬರಿಸಿ ಆ ವ್ಯಕ್ತಿಯ ಭವಿಷ್ಯ ನುಡಿಯುವ ವಿದ್ಯೆಗೆ ಫಲಜ್ಯೋತಿಷ್ಯವೆಂದು ಹೆಸರು. ನುಡಿವಾತ ಫಲಜ್ಯೋತಿಷಿ. ವಿಜ್ಞಾನದ ಯಾವುದೇ ಪ್ರಕಾರದಂತೆ—ಸಂಖ್ಯಾಕಲನವಿಜ್ಞಾನ, ಹವಾವಿಜ್ಞಾನ, ವೈದ್ಯ ಕೀಯ, ರಸಾಯನವಿಜ್ಞಾನ ಇತ್ಯಾದಿ—ಫಲಜ್ಯೋತಿಷ್ಯವೂ ಒಂದು ವಿಜ್ಞಾನ ವಿಭಾಗವೆಂದು ಇದರ ಆರಾಧಕರು ವಾದಿಸುತ್ತಾರೆ. ಅಷ್ಟೇಅಲ್ಲ,ಗುಡುಗುತ್ತಾರೆ ಕೂಡ—ವಾದ ದುರ್ಬಲವಾದಲ್ಲಿ ಅರ್ಭಟ ತಾರಕ್ಕೆ ಏರುವಂತೆ ! ಇವರು ಮಂಡಿಸುವ ಆಧಾರ, ಪುರಾವೆ, ತರ್ಕ ಮುಂತಾದವನ್ನು ವ್ಯಾಪಕವಾಗಿ ನಾಲ್ಕು ವಿಭಾಗಗಳಲ್ಲಿ ಅಳವಡಿಸಬಹುದು :

* ದೈವಿಕವಾದ. ಸೃಷ್ಟಿಕರ್ತ ತನ್ನ ನಿರ್ಮಿತಿಯಾದ ಮಾನವನ ಕಲ್ಯಾಣಾರ್ಥ ಫಲಜ್ಯೋತಿಷ್ಯವನ್ನು ಅನುಗ್ರಹಿಸಿದ್ದಾನೆ. ಇದು ಅಪೌರುಷೇಯ.

* ಅನುಭಾವವಾದ. ತ್ರಿಕಾಲಜ್ಞಾನಿಗಳಾದ ದೇವಮಾನವರು, ಋಷಿ ಪುಂಗವರು ಮತ್ತು ಪ್ರವಾದಿವರೇಣ್ಯರು ತಮ್ಮ ದಿವ್ಯ ದೃಷ್ಟಿಯಿಂದ ವಿಶ್ವದ ಭೂತ ವರ್ತಮಾನ ಭವಿಷ್ಯಗಳನ್ನು ಪರಿವೀಕ್ಷಿಸಿ ಬಟ್ಟಿ ಇಳಿಸಿಟ್ಟಿರುವ ಜ್ಞಾನ ನಿಧಿಯೇ ಫಲಜ್ಯೋತಿಷ್ಯ.

* ತಾರ್ಕಿಕವಾದ. ಖಗೋಳಪಂಡಿತರು ಆಕಾಶಘಟನೆಗಳಿಗೂ ಮಾನವ ನಡವಳಿಕೆಗಳಿಗೂ ತಳಕುಹಾಕಿ ರೂಪಿಸಿರುವ ಜ್ಞಾನಪ್ರಕಾರವೇ ಫಲ ಜ್ಯೋತಿಷ್ಯ.

* ವೈಜ್ಞಾನಿಕವಾದ. ಪ್ರತ್ಯಕ್ಷ ವೀಕ್ಷಣೆ ಮತ್ತು ನಿಷ್ಕೃಷ್ಟ ಪ್ರಯೋಗ ಆಧರಿಸಿ ನಿರ್ಮಿಸಿರುವ ಅತ್ಯಂತ ವ್ಯಾಪಕ ಚಿಂತನ ವಿಶೇಷವೇ ಫಲಜ್ಯೋತಿಷ್ಯ.

ಇವೆಲ್ಲ ವಾದಗಳೂ ತಾರ್ಕಿಕವಾಗಿ ಸಂಗತವಾಗಿವೆ ; ಅಲ್ಲದೇ ಇವು ಪರಸ್ಪರ ಪೂರಕ ಪೋಷಕಗಳೂ ಹೌದು. ಇಲ್ಲಿಯ ಉದ್ದೇಶ : ಭವಿಷ್ಯ ವಾಚನ. ವಿಧಾನ: ಹಲವಾರು. ಹಸ್ತಸಾಮುದ್ರಿಕಾಶಾಸ್ತ್ರ, ಸಂಖ್ಯಾಭವಿಷ್ಯ ಶಾಸ್ತ್ರ, ಶಕುನಶಾಸ್ತ್ರ ಮುಂತಾದವನ್ನೂ ಇದೇ ಸಾಲಿಗೆ ಸೇರಿಸಬಹುದು. ಆದರೆ ಜನರ ಹಾಗೂ ವೃತ್ತಿಫಲಜ್ಯೋತಿಷಿಗಳ ದೃಷ್ಟಿಯಿಂದ ಫಲಜ್ಯೋತಿಷ್ಯ ತನ್ನ 'ವೈಜ್ಞಾನಿಕತೆ'ಯ ಕಾರಣವಾಗಿ 'ಅಧಿಕ ವಿಶ್ವಾಸಾರ್ಹ'ವಾಗಿದೆ.ಎಂದೇ ಇದರ ವ್ಯಾಪ್ತಿ ಮತ್ತು ಜನಪ್ರಿಯತೆ.

ಫಲಜ್ಯೋತಿಷ್ಯವನ್ನು ಬಿ.ವಿ. ರಾಮನ್ ವ್ಯಾಖ್ಯಿಸುವುದು ಹೀಗೆ : "ಆಕಾಶಕಾಯಗಳ ಚಲನೆಗಳ ಮತ್ತು ಭೂಮಿಯಲ್ಲಿಯ ನಡವಳಿಕೆಗಳ ನಡು ವಿನ ಅನ್ಯೋನ್ಯಾವಲಂಬನೆ ಕುರಿತ ವಿಜ್ಞಾನವೇ ಫಲಜ್ಯೋತಿಷ್ಯ—ಅಂದರೆ ನೈಸರ್ಗಿಕ ವಿದ್ಯಮಾನಗಳು, ಭೌತಿಕ ವಿದ್ಯಮಾನಗಳು ಮತ್ತು ಮಾನವ ಮನೋವೈಜ್ಞಾನಿಕ ವಿದ್ಯಮಾನಗಳು, ಅರ್ಥಾತ್ ಗ್ರಹಗಳು ಬೀರುವ ಉದ್ದೀಪನೆಗಳಿಗೆ ಮಾನವ ಪ್ರದರ್ಶಿಸುವ ಅನುಕ್ರಿಯೆಗಳನ್ನು ಈ ವಿಜ್ಞಾನ ಅಭ್ಯಸಿಸುತ್ತದೆ."

ಈ ವ್ಯಾಖ್ಯೆಯಲ್ಲಿ ತಾರ್ಕಿಕ ದೋಷ ಏನೂ ಇಲ್ಲ. ಇದನ್ನು ಆಧರಿಸಿ 'ಅನ್ಯೋನ್ಯಾವಲಂಬನೆ' ಸ್ಥಾಪಿಸಲು ಮುಂದಾದಾಗ ತೀರ ಸಹಜವಾಗಿ ಜಾತಕ ವನ್ನು ತಲಪುತ್ತೇವೆ. ಜಾತಕ ಲೇಖನ, ಈ ಹಿಂದೆ ವಿವರಿಸಿದಂತೆ, ಖಗೋಳ ವಿಜ್ಞಾನವನ್ನು ಆಧರಿಸಿ ನಿರ್ವಹಿಸುವ ಒಂದು ಯಾಂತ್ರಿಕ ಕ್ರಿಯೆ. ಬಿಡಿ ವ್ಯಕ್ತಿ ಬಗೆಗಿನ ಈ ದಾಖಲೆ ಓದಿ ಆತನ ಭವಿಷ್ಯ ನುಡಿಯಲು ಫಲಜ್ಯೋತಿಷಿ ಅನುಸರಿಸುವ ವಿಧಾನ ಏನು ? ಬಿ ವಿ. ರಾಮನ್ ಬರೆದಿದ್ದಾರೆ "........ ನೂರು ಜಾತಕಗಳಲ್ಲಿ ಕುಜ ಎರಡನೆಯ ಮನೆಯಲ್ಲಿ ಇದೆಯೆಂದೂ [ಆ ಜಾತಕರಿಗೆ] ಕಣ್ಣುಗಳಲ್ಲಿ ತುಸು ತೊಂದರೆ ಇದೆಯೆಂದೂ ಭಾವಿಸೋಣ. ಈಗ ೧೦೧ನೆಯ ಜಾತಕದಲ್ಲಿ ಕುಜನಸ್ಥಾನ ತದ್ವತ್ತಾಗಿದ್ದರೆ, ಈ ಮೇಲಿನ

ಅಂಕೆ-ಅಂಶಗಳನ್ನು ಆಧರಿಸುತ್ತ, ಅದೇ ಸನ್ನಿವೇಶ [ಕಣ್ಣುಗಳಲ್ಲಿ ತಂಸು ತೊಂದರೆ] ಈತನಲ್ಲಿಯೂ ತಲೆದೋರುವುದೆಂದು ಹೇಳುವುದು ತರ್ಕಸಮ್ಮತ ವಾಗಿದೆ. ಈ ಕಾರಣದಿಂದಲೇ ನಾವು ಫಲಜ್ಯೋತಿಷ್ಯಾತ್ಮಕ ಸಂಗತಿಗಳನ್ನು ಆಶ್ರಯಿಸುವುದಾಗಿದೆ." (*Astrology and the Hoax of "Scientific Temper"*—Chief Editor Gayatri Devi Vasudev)

ಇದರ ಅರ್ಥವೇನು ?

* ಹಲವು ಸಾವಿರ-ಲಕ್ಷ-ಕೋಟಿ ಜಾತಕಗಳನ್ನು ಕಲೆಹಾಕಿ ಇವನ್ನು ಸೂರ್ಯ ಒಂದನೆಯ ಮನೆಯಲ್ಲಿರುವ (ಮೇಷರಾಶಿ) ಜಾತಕಗಳ ಗುಂಪು, ಎರಡನೆಯದರಲ್ಲಿರುವವುಗಳ ಗುಂಪು, ಇತ್ಯಾದಿ ಎಂದು ವಿಂಗಡಿಸೋಣ. 'ನವ ಗ್ರಹ'ಗಳೆಲ್ಲವನ್ನೂ ಕುರಿತಂತೆ ಇಂಥ ಗುಂಪುಗಳನ್ನು ಏರ್ಪಡಿಸಬೇಕು. ಆಗ ನಮಗೆ [೯ ಗ್ರಹಗಳು] × [೧೨ ಮನೆಗಳು] ಹೀಗೆ ೧೦೮ ನಿರ್ದಿಷ್ಟ ಗುಂಪು ಗಳು ದೊರೆಯುತ್ತವೆ. ಇವನ್ನು ಸೂರ್ಯ-ಮೇಷ, ಸೂರ್ಯ-ವೃಷಭ, ಇತ್ಯಾದಿ, ನಿರ್ದಿಷ್ಟ ಹೆಸರುಗಳಿಂದ ಸೂಚಿಸೋಣ. ಆದ್ದರಿಂದ ಶನಿ-ವೃಶ್ಚಿಕ ಗುಂಪು ಎಂದರೆ ಇದರಲ್ಲಿರುವ ಎಲ್ಲ ಜಾತಕಗಳಲ್ಲಿಯೂ ಶನಿಗ್ರಹ ವೃಶ್ಚಿಕ ರಾಶಿಯಲ್ಲಿದೆಯೆಂದು ತಿಳಿಯಬೇಕು.

* ನಾವು ಕಲೆಹಾಕಿರುವ ಜಾತಕಗಳನ್ನು ಕುರಿತ ಜಾತಕರ (ವ್ಯಕ್ತಿಗಳ) ಜೀವನವೃತ್ತಾಂತಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸೋಣ. ಲಿಂಗ, ಎತ್ತರ, ಭಾರ, ಚರ್ಮದ ಬಣ್ಣ, ಆರೋಗ್ಯ, ವೃತ್ತಿ, ಪ್ರವೃತ್ತಿ, ಗತಿಸಿದವರಾಗಿದ್ದರೆ ಆಯುಷ್ಯ, ಸಾವಿನ ಕಾರಣ ಮುಂತಾದವು ಈ ಯಾದಿಗೆ ಸೇರುತ್ತವೆ. ಇಂಥ ವಿಭೇದೀಕರಣಸಂಖ್ಯೆ ಅಧಿಕವಾದಷ್ಟೂ ಲಭ್ಯಮಾಹಿತಿ ಅಧಿಕ ನಿಖರವೂ ವಿಶ್ವಾಸಾರ್ಹವೂ ಆಗುತ್ತದೆ. (ಇಲ್ಲಿ ಆಧುನಿಕ ಗಣಕಗಳ ಪಾತ್ರ ಮಹತ್ತರ ವಾದದ್ದು.)

* ಪ್ರತಿಯೊಂದು ಗ್ರಹ-ರಾಶಿ ಗುಂಪಿನ ಜಾತಕರ ಜೀವನ ವೃತ್ತಾಂತ ಗಳಲ್ಲಿ ಸರ್ವ ಸಾಮಾನ್ಯವಾಗಿರುವವನ್ನು ಆಯೋಣ. ಉದಾಹರಣೆಗೆ ರಾಮನ್ ನೀಡಿರುವ ನಿದರ್ಶನದಲ್ಲಿ ಕುಜ-ವೃಷಭ ಗುಂಪಿನ ೧೦೦ ಜಾತಕರು ಕಣ್ಣಿನ ತೊಂದರೆಗೆ ಈಡಾಗಿದ್ದಾರೆ. ಇದೇ ಗುಂಪಿನ ಇನ್ನೂ ಹಲವು ನೂರು ಜಾತಕರು ಕೂಡ ಈ ತೊಂದರೆಯಿಂದ ನರಳುತ್ತಿದ್ದಾರೆಂದು ನಮ್ಮ ತಪಾಸಣೆ

ಯಿಂದ ತಿಳಿದುಬರಬಹುದು. ಸಹಜವಾಗಿಯೇ "ಕುಜ-ವೃಷಭ-ನೇತ್ರ ವ್ಯಾಧಿ ಅವಿನಾಸಂಬಂಧ" ಸ್ಥಿರೀಕೃತವಾಗುತ್ತವೆ. ಆದರೆ ತೀರ್ಮಾನ ಇಷ್ಟು ಸುಲಭ ಅಲ್ಲ, ಕ್ಷಿಪ್ರವೂ ಅಲ್ಲ. ಏಕೆಂದರೆ ಇವೇ ಜಾತಕರು ಇತರ ಗುಂಪು ಗಳಿಗೂ ಸೇರಿರುತ್ತಾರೆ. ಅವುಗಳಿಂದ ಅನುಗತವಾಗುವ ತೀರ್ಮಾನಗಳು ಬೇರೆಯೇ ಇರಬಹುದು, ಈ ಮೇಲಿನದಕ್ಕೆ ವಿರುದ್ಧವಾಗಿಯೂ ಇರಬಹುದು. ಇನ್ನೂ ಸೂಕ್ಷ್ಮತರ ವಿಶ್ಲೇಷಣೆ ಮಾಡಿದ ಹೊರತು ಯಾವುದೇ ತೀರ್ಮಾನಕ್ಕೆ ಬರಲಾಗದು.

* ಅಂದ ಮೇಲೆ ಪ್ರತಿಯೊಬ್ಬ ಜಾತಕನನ್ನೂ ಕುರಿತಂತೆ ನಾವು ಪರಿಶೀಲಿಸ ಬೇಕಾದ ಗುಂಪುಗಳ ಸಂಖ್ಯೆ ಎಷ್ಟು ? ಕನಿಷ್ಠ ೨, ಗರಿಷ್ಠ ೯. ಏಕೆಂದರೆ ರಾಹು-ಕೇತು ಸದಾ ಎದುರು ಬದಿರಾಗಿಯೇ ಇರಬೇಕು. ಉಳಿದ ೭ ಗ್ರಹ ಗಳು ರಾಹುಗೃಹದಲ್ಲಿಯೋ ಕೇತುಗೃಹದಲ್ಲಿಯೋ ಸಂಗಮಿಸಬಹುದು(ಅಂದರೆ ಅಷ್ಟಗ್ರಹಯೋಗ ಸಾಧ್ಯ, ಆದರೆ ನವಗ್ರಹಯೋಗ ಅಸಾಧ್ಯ.) ಹೀಗೆ ಕನಿಷ್ಠ ೨. ಅಥವಾ ೭ ಗ್ರಹಗಳು ರಾಹು-ಕೇತುಗೃಹಗಳ ಹೊರತಾದ ೧೦ ಗೃಹಗಳಲ್ಲಿ ಬಿಡಿಬಿಡಿಯಾಗಿ ಹಂಚಿಕೊಂಡಿರಬಹುದು: ಹೀಗೆ ಗರಿಷ್ಠ ೯. ಈ ಲೇಖನ ಬರೆಯುತ್ತಿರುವ ಮುಹೂರ್ತದ ಜಾತಕವಿದು (ಚಿತ್ರ ೬) :

ಆದ್ದರಿಂದ ಈ ಜಾತಕನ ಗುಣಲಕ್ಷಣ ಮತ್ತು ಭವಿಷ್ಯ ಕುರಿತಂತೆ ೮ ಗುಂಪುಗಳನ್ನು ಪರಿಶೀಲಿಸಬೇಕಾಗುತ್ತದೆ.

ಇಂಥ ದೊಂಬರಲಾಗಗಳು ನಿಸರ್ಗದಲ್ಲಿ ಹೇಗೆ ತಾನೇ ಸಿಂಧುವಾದಾವು ಎಂಬ ಸಂದೇಹ ಅಥವಾ ಯೋಚನೆ ಫಲಜ್ಯೋತಿಷಿಗಳಿಗಾಗಲೀ ಇವರ ಅಂಧಾನುಯಾಯಿಗಳಿಗಾಗಲೀ ಮೂಡದಿರುವುದು ಸಾಮೂಹಿಕ ಮತ್ತು ದೀರ್ಘಕಾಲಿಕ ಮಾನಸಿಕ ವಿಭ್ರಮೆ ಯಾವ ತೀವ್ರತೆಗೆ ಏರುವುದು ಸಾಧ್ಯ ಎನ್ನುವುದಕ್ಕೆ ದುಃಖಕರ ನಿದರ್ಶನ: "ಮಾನವ ಜನುಮ ದೊಡ್ಡದು. ಇದರ ಹಾನಿಮಾಡಲು ಬ್ಯಾಡಿ ಹುಚ್ಚಪ್ಪಗಳಿರಾ !"

ಈಗ, ಹಿಂದೆ ಉಲ್ಲೇಖಿಸಿರುವ (ರಾಮನ್ ನೀಡಿರುವ) ನಿದರ್ಶನ ವನ್ನೇ ತೆಗೆದುಕೊಳ್ಳೋಣ.

ಪ್ರಶ್ನೆ : ವೃಷಭದಲ್ಲಿ ಕುಜ ಇದ್ದರೆ ಆ ವ್ಯಕ್ತಿಗೆ ನೇತ್ರವ್ಯಾಧಿ ಬರ ಬಹುದು ಎನ್ನಲು ಆಧಾರವೇನು ?

| ಕು | ಬು ಶು | ರ | ಕೇ |
|---|---|---|---|
| | ೧೬-೫-೧೯೬೨ | | |
| ಶ | ಹುಣ್ಣಿಮೆ | | ಗು |
| ರಾ | | ಚಂ | |

ಚಿತ್ರ ೬. ಈ ಜಾತಕ (ಅಂದರೆ ವ್ಯಕ್ತಿ) ಸೂರ್ಯ–ವೃಷಭ, ಚಂದ್ರ–ತುಲಾ, ಕುಜ-ಮೀನ, ಬುಧ-ಶುಕ್ರ-ಮೇಷ, ಗುರು–ಸಿಂಹ, ಶನಿ-ಮಕರ, ರಾಹು-ಧನು ಮತ್ತು ಕೇತು–ಮಿಥುನ ಎಂಬ ಗುಂಪುಗಳಿಗೆ ಸೇರಿದಾತ. ಯಾರು ಹಿತವರು ಇವಗೆ ಈ ಎಂಟರೊಳಗೆ ? ಕನ್ಯಾ ಲಗ್ನದಲ್ಲಿ ಈ ಲೇಖನ ಆರಂಭಿಸಿದೆ. ಆಗ ಕಾಲ ಎಷ್ಟು ?

ಉತ್ತರ : ಸಾವಿರಾರು ಇಂಥ ಜಾತಕಗಳನ್ನು ಆಯಾ ವ್ಯಕ್ತಿಗಳ ಕಣ್ಣಿನ ಆರೋಗ್ಯದ ಜೊತೆ ಹೋಲಿಸಿ ನೋಡುವಾಗ ಇದು ಸ್ಪಷ್ಟವಾಗುತ್ತದೆ. ಇದು ಸಂಖ್ಯಾಕಲನವಿಜ್ಞಾನದ ಪ್ರಕಾರ ತಳೆಯುವ ತೀರ್ಮಾನ. ಉದಾಹರಣೆಗೆ ಹಿಂದಿನ ಹಲವಾರು ವರ್ಷಗಳ ಮಳೆ ದಾಖಲೆಗಳನ್ನು ಪರಿಶೀಲಿಸಿ ಹವಾವಿಜ್ಞಾನಿಗಳು ಮುಂದಿನ ಹಂಗಾಮಿನಲ್ಲಿ ಮಳೆ ಹೇಗೆ ಬಿದ್ದೀತೆಂದು ಅಂದಾಜಿಸುವುದಿಲ್ಲವೇ, ಹಾಗೆ. ಅಧಿಕಾಧಿಕ ಮಾಹಿತಿಯಿಂದ ನಿಖರಾತಿನಿಖರ ತೀರ್ಮಾನ ಸಿದ್ಧಿಸುತ್ತದೆ.

ಪ್ರಶ್ನೆ : ನೀವು ನೀಡಿರುವ ಮಳೆ ಅಂದಾಜು ಹೋಲಿಕೆ ಸರಿಹೊಂದದು. ಇಲ್ಲಿ—ಅಂದರೆ ಮಳೆ ಕುರಿತ ಭವಿಷ್ಯವಾಣಿಯಲ್ಲಿ—ವ್ಯವಹಾರವಿರುವುದು ನಿಖರ ಅಳತೆಗೆ ಒದಗುವ ಭೌತಬಲ ಹಾಗೂ ಕಾರಕಗಳ

ಜೊತೆ. ಉದಾಹರಣೆಗೆ ಸ್ಥಳದ ಭೌಗೋಲಿಕ ನೆಲೆ, ವಾಯುಮಂಡಲ ಸಂಮರ್ದ, ಉಷ್ಣತೆಯ ಏರಿಳಿತ, ಆರ್ದ್ರತೆ, ಸಮುದ್ರ ಸಾಮೀಪ್ಯ ಮುಂತಾದವು. ವಿಜ್ಞಾನಿಯ ಬತ್ತಳಿಕೆಯಲ್ಲಿರುವ ಅಸಂಖ್ಯ ಅಸ್ತ್ರಗಳ ಪೈಕಿ ಸಂಖ್ಯಾಕಲನ ವಿಜ್ಞಾನ ಒಂದು ಮಾತ್ರ. ಇದರ ಪಾತ್ರ ನಿರ್ಣಾಯಕವಲ್ಲ. ಈ ಅಸ್ತ್ರದ ಪ್ರಯೋಗ ಅಥವಾ ಉಪಯೋಗ ಫಲಜ್ಯೋತಿಷ್ಯದಲ್ಲಿಯೂ ಇದೆಯೆಂಬ ಒಂದೇ ಕಾರಣದಿಂದ ಕುಜ-ವೃಷಭ-ನೇತ್ರದೋಷ ಸಂಬಂಧ ಸಾಬೀತಾಗುವುದಿಲ್ಲ. ೧೦,೦೦೦ ಜಾತಕಗಳ ಪೈಕಿ ೯೯೯೯ ಜಾತಕಗಳಲ್ಲಿ ಸಂಬಂಧ ಏರ್ಪಟ್ಟರೂ ಇದು ಸಿದ್ಧವಲ್ಲ. ಏಕೆಂದರೆ ಇಲ್ಲಿ 'ಬಹುಮತ'ವೆಂದೂ ನಿರ್ಣಾಯಕವಲ್ಲ, ಉಳಿದ ಒಂದು ಜಾತಕದಲ್ಲಿ ಸಂಬಂಧ ಏಕೆ ಏರ್ಪಡಲಿಲ್ಲ ಎನ್ನುವುದು ಅಷ್ಟೇ ಮುಖ್ಯವಾಗುತ್ತದೆ. ವಾಸ್ತವವಾಗಿ ಈ ಪೂರ್ವಗ್ರಹವೇ ತಪ್ಪು.

ತುಂಬಿ ಹರಿಯುತ್ತಿರುವ ಹೊಳೆದಾಟುವುದು ಹೇಗೆ ? ಸಂಖ್ಯಾಕಲನ ವಿಜ್ಞಾನವನ್ನು ಪುಸ್ತಕದಲ್ಲಿ ಓದಿ ಪರಿಣತಿಗಳಿಸಿದ್ದ ಯುವಸಾಹಸಿ ಹೊಳೆಯ ಅಗಲವನ್ನು ಗಣನೆಮಾಡಿ ನಿರ್ಧರಿಸಿದ. ಬಳಿಕ ನೀರಿನ ಆಳ ಬೇರೆ ಬೇರೆ ಬಿಂದುಗಳಲ್ಲಿ ಎಷ್ಟಿರಬಹುದೆಂಬುದನ್ನು ಅಂದಾಜು ಮಾಡಿದ. ಈ ಎಲ್ಲ ಮಾಹಿತಿಗಳನ್ನು ಆಧರಿಸಿ ನೀರಿನ ಸರಾಸರಿ ಆಳವನ್ನು ಲೆಕ್ಕಹಾಕಿದ. ಅದು ಕೇವಲ ೫೦ ಸೆಂಮೀ ಎಂದು ಗೊತ್ತಾಯಿತು. "ಓ ಇಷ್ಟೇ ತಾನೇ ! ನಾನು ನಡೆದೇ ಈ ಹೊಳೆ ದಾಟಬಲ್ಲೆ !" ಎಂದ. ಹೊಸ ಸಿಪಾಯಿಯ ಹುಸಿಗತ್ತಿನಿಂದ ಕೈಬೀಸಿ ಕಾಲುಚಾಚಿ ನಡೆದೇ ನಡೆದ, ನಡುವಿನಲ್ಲಿ ಮುಳುಗಿಯೇ ಹೋದ !

ನೀತಿ : ಅಸ್ತ್ರದ ಬೆಲೆಯನ್ನು ಉಪಯೋಗಿಯ ವಿವೇಚನೆಯಲ್ಲಿ ಕಾಣು—ಸಾಕ್ಷಾತ್ ಅಸ್ತ್ರದಲ್ಲೇ ಅಲ್ಲ.

ನೀವು ಪ್ರಾಯೋಗಿಕವಾಗಿ ಸಾಧಿಸಬೇಕಾದದ್ದು ಇದು: ವೃಷಭದಲ್ಲಿ ಕುಜ ಇರುವ ವ್ಯಕ್ತಿಯ ದೇಹಾರೋಗ್ಯದ ಮೇಲೆ ಈ ರಾಶಿಯ ಅಥವಾ ಗ್ರಹದ ಅಥವಾ ಎರಡರ ಭೌತ ಪ್ರಭಾವ ಏನು ? ಅದನ್ನು ಅಳೆಯುವುದು ಹೇಗೆ ? ಅದರಿಂದ ನೇತ್ರದೋಷ ಮೂಡುವ ವಿಧಾನವೇನು ? ಇತ್ಯಾದಿ. ಅಂಥ ಯಾವ ಬಲಗಳೂ ವರ್ತಿಸುತ್ತಿಲ್ಲ ! ಏನು ಹೇಳುತ್ತೀರಿ ?

ಉತ್ತರ : ಈ ಕೇವಲ ಲೌಕಿಕ ಸಂದೇಹಗಳಿಗೆ ಉತ್ತರಗಳನ್ನು ನಮ್ಮ ಪ್ರಾಚೀನ ಋಷಿಗಳು ದಿವ್ಯದೃಷ್ಟಿಯಿಂದ ಕಂಡು ಶಾಸ್ತ್ರ ಗ್ರಂಥಗಳಲ್ಲಿ ದಾಖ

ಲಿಸಿದ್ದಾರೆ. ನೀವು ಅವರ ಪ್ರತಿಭೆಯ ಮಟ್ಟಕ್ಕೆ ಏರಿ ಆ ಗ್ರಂಥಗಳನ್ನು ಓದಿದರೆ ನಿಮ್ಮ ಅಂತರಾತ್ಮಕ್ಕೆ ಉತ್ತರ ಸ್ಫುರಿಸುತ್ತದೆ.

ತಿಳಿಯಿತೇ ? ಗಿರಾಕಿಪಶುವಿನ ಅಜ್ಞಾನ ಅಸಹಾಯಕತೆ ಮತ್ತು ಮುಗ್ಧ ಶ್ರದ್ಧೆ ಈ ಫಲಜ್ಯೋತಿಷಿ ವ್ಯಾಘ್ರನ ಏಕೈಕ ಬಂಡವಾಳ. ತನ್ನ ಅಗಾಧ ಅಜ್ಞಾನವನ್ನೂ ಅಪವಿತ್ರ ಧೋರಣೆಯನ್ನೂ ಮರೆಮಾಚಲು ಈತ ಬಳಸುವ ದಿವ್ಯ ಮಂತ್ರಗಳೆಂದರೆ 'ಪ್ರಾಚೀನ,' 'ಋಷಿ,' 'ದಿವ್ಯದೃಷ್ಟಿ,' 'ಶಾಸ್ತ್ರಗ್ರಂಥ' ಮುಂತಾದವು.

ವಿಖ್ಯಾತ ವಿಜ್ಞಾನ ಲೇಖಕ ಐಸಾಕ್ ಅಸಿಮಾವ್ (೧೯೨೦-೯೨) Change of Space and Time ಎಂಬ ಲೇಖನದಲ್ಲಿ ಹ್ಯಾಲೀ ಧೂಮಕೇತು ಕ್ರಿಪೂ ೪೬೭ರಿಂದ ಕ್ರಿಶ ೧೯೧೦ರ ತನಕ ಕ್ರಮಾಗತವಾಗಿ ಮೂವತ್ತೆರಡು ಸಲ ದರ್ಶನವಿತ್ತಿರುವುದನ್ನು ದಾಖಲಿಸಿದ್ದಾರೆ ; ಮತ್ತು ಪ್ರತಿಯೊಂದು ಸಂದರ್ಭದಲ್ಲಿಯೂ ಐತಿಹಾಸಿಕ ದುರ್ಘಟನೆಗಳನ್ನು ವಿವರಿಸಿ ಹೇಗೆ ಈ ಧೂಮಕೇತುವೇ ಅವು ಸಂಭವಿಸಲು ಕಾರಣ ಎಂಬುದನ್ನು ವಾದಿಸಿದ್ದಾರೆ.

ಉದಾಹರಣೆಗೆ ಕ್ರಿಪೂ ೩೧೫ರ ದರ್ಶನ. ಗ್ರೀಕ್ ಸಾರ್ವಭೌಮ ಅಲೆಗ್ಸಾಂಡರ್ ಮಹಾಶಯ (ಕ್ರಿಪೂ ೩೫೬-೩೨೩) ಕ್ರಿಪೂ ೩೩೪-೩೨೩ ಅವಧಿಯಲ್ಲಿ ಕೈಗೊಂಡ ದಂಡಯಾತ್ರೆಗಳಿಂದ ಜಗದೇಕ ವೀರನೆಂಬ ಬಿರುದಿಗೆ ಪಾತ್ರನಾಗಿದ್ದ. ಆದರೆ ಆ ವೇಳೆಗಾಗಲೇ ಕ್ರಿಪೂ ೩೧೫ರಲ್ಲಿ ಗೋಚರವಾಗಲಿದ್ದ ಧೂಮಕೇತುವಿನ ಕರಾಳಛಾಯೆ ಅವನ ಮೇಲೆಯೂ ಅವನ ಸಾಮ್ರಾಜ್ಯದ ಮೇಲೆಯೂ ಕವಿದಿತ್ತು. ಕ್ರಿಪೂ ೩೨೩ರಲ್ಲಿ ಅವನು ಮಡಿದ. ಮುಂದೆ ಅವನ ಚಕ್ರಾಧಿಪತ್ಯ ಅಂತಃಕಲಹಗಳಿಂದ ಹರಿಹಂಚಾಗಿ ಒಡೆದು ಧೂಮಕೇತು ದೃಷ್ಟಿ ಬೀಳುವ ವೇಳೆಗೆ ಗತವೈಭವವಾಗಿ ಹೋಯಿತು. ದೇವ ಸಂದೇಶವನ್ನು ಗ್ರಹಿಸದೇ ಅಲೆಗ್ಸಾಂಡರ್ ಹಾಳಾಗಿಹೋದ.

ಕ್ರಿಶ ೧೯೮೬ (ಈ ವ್ಯಾಖ್ಯಾನ ನನ್ನದು, ಅಸಿಮಾವ್ ಅವರದಲ್ಲ). ವರ್ತಮಾನ ಕಾಲದ ಕುತಂತ್ರ, ಕುವಾದ ಮತ್ತು ಕುಚೋದ್ಯ ಪರಾಕಾಷ್ಠೆ ಎಂದೂ ಆಸ್ತಿಕ ಮಹಾಜನರಲ್ಲಿ ಕುಪ್ರಸಿದ್ಧವಾಗಿರುವ ವಿಜ್ಞಾನ ಮತ್ತು ತಂತ್ರ ವಿದ್ಯೆ, ಭಗವದ್ಭಕ್ತರು ಮತ್ತು ಆರ್ಷೇಯ ಋಷಿಗಳು ತಿಳಿಯಲಾರದ ಗೌಡ ಬಂಗಾಳ ಮಾಡಿ, ೧೯೮೨ರಷ್ಟು ಹಿಂದೆಯೇ ನವಗ್ರಹಯೋಗ ಅಥವಾ ಗುರು ಪರಿಣಾಮ (Jupiter effect) ಎಂಬ ದುಷ್ಟಕೂಟ ಮುಹೂರ್ತದಲ್ಲಿ

ಹ್ಯಾಲೀಯನ್ನು ಆಕಾಲಿಕವಾಗಿ ಪತ್ತೆಹಚ್ಚಿವೆ. ಬ್ರಹ್ಮಸೃಷ್ಟಿಯಲ್ಲಿ ಪ್ರತಿಯೊಂದು ಆಕಾಶ ಘಟನೆಯೂ ದೈವನಿಯಂತ್ರಿತವಾಗಿ ಮಾನವನಿಗೆ ಯಥಾವಕಾಶ ಪ್ರಕಟವಾಗಬೇಕಾದದ್ದು ವಿಧಿನಿರ್ಣೀತ ನಿಯಮವಾಗಿರುವಲ್ಲಿ ಮಾನವ ತನ್ನ ಅತಿಜ್ಞಾನದ ಆವಜ್ಞೆ ಮತ್ತು ಅಹಂಕಾರಗಳಿಂದ ದೈವಸಂಕಲ್ಪವನ್ನು ಉಲ್ಲಂಘಿಸಿದ್ದರ ವಿಷಫಲ ಆಗಾಗಲೇ ಪ್ರಾಪ್ತವಾದದ್ದು ಹೇಗೆ ದೈವಬಲಕ್ಕೆ ಎದುರಾಗಿ ಪುರುಷಬಲ ನಿಷ್ಫಲವೆಂಬುದನ್ನು ಶ್ರುತಪಡಿಸಿದೆ. ಇದಕ್ಕೆ ನಿದರ್ಶನಗಳಾಗಿ ಅಮೆರಿಕ ಅಧ್ಯಕ್ಷ ನಿಕ್ಸನ್ ಅವರ ವಿನಾಕಾರಣ ಮಾನಭಂಗ ಮತ್ತು ಅಧಿಕಾರ ಪತನ, ರಷ್ಯಾ ಅಧ್ಯಕ್ಷ ಬ್ರೆಝ್ನೆವ್ ಅವರ ಅಕಾಲ ಮರಣ ಮತ್ತು ಆ ದೇಶದೊಳಗಿನ ತುಮುಲ, ಇಂದಿರಾಗಾಂಧಿಯವರ ಕಗ್ಗೊಲೆ ಮತ್ತು ಭಾರತದೊಳಗಿನ ಹಾಲಾಹಲ ಅಲ್ಲದೇ ಮೆಕ್ಸಿಕೋದಲ್ಲಿಯ ಭೂಕಂಪನ ದುರಂತ, ಚಾಲೆಂಜರ್ ಆಕಾಶಶಾಲಿಯ ಆಸ್ಫೋಟನೆ, ಕರ್ನಾಟಕದಲ್ಲಿಯ ಬರಗಾಲ ಮುಂತಾದವನ್ನು ಹೆಸರಿಸಬಹುದು.

"ಇದು ಭಾಷಾ ಚಮತ್ಕಾರ, ತಾರ್ಕಿಕ ಕುಚೋದ್ಯ, ಸೈತಾನ್ ಮಾಡಿದ ವೇದಪಠನ" ಎಂದು ಮುಂತಾಗಿ ನೀವು ಗೊಣಗುವುದು ನನಗೆ ಕೇಳುತ್ತಿದೆ. ತಪ್ಪು ವಿಜ್ಞಾನದ್ದಲ್ಲ, ವೈಜ್ಞಾನಿಕ ವಿಧಾನದ್ದೂ ಅಲ್ಲ, ಘಟನೆಗಳ ಅನುಕ್ರಮದ್ದಂತೂ ಖಂಡಿತವಾಗಿಯೂ ಅಲ್ಲವೇ ಅಲ್ಲ. ಅದು ಫಲಜ್ಯೋತಿಷ್ಯದ್ದು, ಅದರ ನಯವಂಚನೆಯ ಮಾರ್ಗದ್ದು, ಲೌಕಿಕ ಘಟನೆಗಳನ್ನು ಸ್ಥಳೀಯ ಚೌಕಟ್ಟಿನಲ್ಲಿ ಅರ್ಥವಿಸಲು ಪ್ರಯತ್ನಿಸದೆ ಗಗನ ಘಟನೆಗಳ ಜೊತೆ ತಳಕು ಹಾಕಲು ನಡೆಸುವ ಅವೈಜ್ಞಾನಿಕ ವಿಧಾನದ್ದು.

ನಾನು ಇಲ್ಲಿ ಸಂಕ್ಷೇಪಿಸಿ ಬರೆದಿರುವುದಕ್ಕಿಂತ ಎಷ್ಟೋ ವಿಸ್ತಾರವಾಗಿ ಹ್ಯಾಲೀಯ ಮೂವತ್ತೆರಡು ಕ್ರಮಾಗತದರ್ಶನಗಳಿಗೂ ವ್ಯಾಖ್ಯಾನ ಬರೆದಿರುವ ಅಸಿಮಾವ್ ಸಮಾರೋಪವಾಗಿ ಬರೆದಿರುವ ಮಾತು ಗಮನಾರ್ಹವಾಗಿದೆ :

"ತುಂಬ ಪರಿಣಾಮಕಾರಿಯಾಗಿದೆ ಅಲ್ಲವೇ ? ಅಂದ ಮೇಲೆ ಫಲಜ್ಯೋತಿಷ್ಯದಲ್ಲಿ ಕೊಂಚವಾದರೂ ಹುರುಳು ಇರಲೇಬೇಕು !

"ಇಲ್ಲ. ನಿಜಕ್ಕೂ ಇಲ್ಲ, ನನ್ನ ತುಸು ಅವಿನಯವನ್ನು ನೀವು ಮನ್ನಿಸುವಿರಾದರೆ, ಈ ಮೇಲಿನ ಪಟ್ಟಿ ನನ್ನ ಕಲ್ಪನಾ ಸಾಮರ್ಥ್ಯ ಪ್ರದರ್ಶಿಸಿರುವ ಅದ್ಭುತ ಚಳಕ. ಕ್ರಿಪೂ ೭೦೦ರಿಂದ ತೊಡಗಿ ಕ್ರಮಸಹಿತ ಅಥವಾ ಕ್ರಮ

ರಹಿತ ಅವಧಿಗಳಲ್ಲಿ ಅಳವಡಿಸಿರುವ ಮೂವತ್ತಮೂರು ಇಸವಿಗಳ ಯಾವುದೇ ಯಾದಿಯನ್ನು ನನಗೆ ಕೊಡಿ ಮತ್ತು ಯೋಚಿಸಲು ಕೊಂಚ ಅವಕಾಶ ನೀಡಿ. ಈ ಮೇಲಿನದರಷ್ಟೇ ಪರಿಣಾಮಕಾರಿಯಾದ ನಿರ್ಣಾಯಕ ಘಟನೆಗಳ ಒಂದು ಪಟ್ಟಿಯನ್ನು ಖಾತ್ರಿ ತಯಾರಿಸಿಕೊಡುತ್ತೇನೆ. ಇಂಥ ಐವತ್ತು ಪಟ್ಟಿಗಳು ನಿಮ್ಮ ಎದುರು ಇರುವಾಗ—ಮುಖ್ಯವಾಗಿ ಪೌರಸ್ತ್ಯ ಇತಿಹಾಸ, ತಂತ್ರ ವಿದ್ಯಾತ್ಮಕ ಪ್ರಗತಿ, ಸಾಂಸ್ಕೃತಿಕ ಘಟನೆಗಳು ಮುಂತಾದವನ್ನು ಕೂಡ ಪರಿ ಗಣಿಸಿದ್ದಾದರೆ—ಐವತ್ತು ವಿಭಿನ್ನ ವ್ಯಾಖ್ಯಾನಗಳನ್ನು ಮಂಡಿಸುವುದು ತೀರ ಸುಲಭ. ಇವುಗಳ ನಡುವೆ ಅತ್ಯುತ್ತಮವಾದದ್ದು ಯಾವುದು ? ಆಯುವುದು ಕಡುಕಷ್ಟ.''

ಊಹನಾಸಾಮರ್ಥ್ಯವನ್ನು ಮೇರೆಮೀರಿ ಹರಿಯಲು ಬಿಟ್ಟರೆ ಯಾವುವೇ ಘಟನೆಗಳ ಅಥವಾ ಊಹನಾ ಪರಿಕಲ್ಪನೆಗಳ ನಡುವೆ 'ವೈಜ್ಞಾನಿಕ ಸಂಬಂಧ' ಸ್ಥಾಪಿಸುವುದು ಮತ್ತು ಆ ಮೂಲಕ ಜನರಲ್ಲಿ ಭಯ ಗೌರವ ಬಿತ್ತುವುದು ಕಷ್ಟವಲ್ಲ. ಈ ಧಾಟಿಯಲ್ಲಿ ಸಾಗುವಾತನಿಗೆ ಪ್ರಾಚೀನ ಧರ್ಮ ಗ್ರಂಥಗಳಲ್ಲಿ ಅರ್ವಾಚೀನ ಜ್ಞಾನವಿಜ್ಞಾನಗಳೂ ಭವಿಷ್ಯ ಘಟನೆ ಅಭಿವರ್ಧನೆ ಗಳೂ ಕಾಣುವುದು ತೀರ ಸುಲಭ. ಫಲಜ್ಯೋತಿಷ್ಯದ ತಾಯಿ ಬೇರು ಅಥವಾ ಬೆನ್ನೆಲುಬು ನೆಲಸಿರುವುದು ಈ ಅವಿದ್ಯೆಯಲ್ಲಿ, ಕುತರ್ಕದಲ್ಲಿ, ವಾಮತಂತ್ರ ದಲ್ಲಿ ಮತ್ತು ಹಗಲು ದರೋಡೆಯಲ್ಲಿ.

ಆದ್ದರಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ : ವ್ಯಕ್ತಿಯ (ಜಾತಕನ) ಭವಿಷ್ಯಕ್ಕೂ ಆಕಾಶ ಕಾಯಗಳ ವಿನ್ಯಾಸಕ್ಕೂ ನಡುವೆ ಯಾವ ಸಂಬಂಧವೂ ಖಾತ್ರಿ ಇಲ್ಲ; ಎಂದೇ, ಆ ಇರದ-ಸಂಬಂಧವನ್ನು ಇದೆಯೆಂದು ಸಾಧಿಸಲು ಅನುಸರಿಸುವ ಪ್ರತಿಯೊಂದು ವಾದವೂ (ಅನುಭಾವ, ಪೂಜೆ, ಹರಕೆ, ಪ್ರಾಚೀನ ಗ್ರಂಥಾಧ್ಯಯನ, ದೇವಮಾನವರಿಗೆ ನಜರೊಪ್ಪಿಸುವುದು, 'ಕಾರಣಿಕ' ನೆಲೆಗಳಿಗೆ ಯಾತ್ರೆ ಹೋಗಿ ದೈನ್ಯ ಪ್ರದರ್ಶಿಸುವುದು ಮುಂತಾದವು) ಅಬದ್ಧ, ಅತಾರ್ಕಿಕ, ಆತ್ಮಘಾತಕ ಆಗುವುದು ಕಂಡಂತೆಯೇ ಇದೆ.

ಈಗ ಪುನಃ ನಮ್ಮ ಭವಿಷ್ಯವಾಚಕ ಫಲಜ್ಯೋತಿಷಿಗಳು ಅನುಸರಿಸುವ 'ವೈಜ್ಞಾನಿಕ ವಿಧಾನ'ವನ್ನು ಪರಿಶೀಲಿಸೋಣ.

ಅಸಂಖ್ಯ ಜಾತಕಗಳನ್ನೂ ಆಯಾ ಜಾತಕರ ಜೀವನ ವೃತ್ತಾಂತ ಗಳನ್ನೂ ವ್ಯವಸ್ಥಿತವಾಗಿ ತಳಕುಹಾಕಿದಾಗ ಪ್ರತಿಯೊಂದು ಜಾತಕದ

ಬಗೆಗೂ ಹಲವಾರು ನಿರ್ದಿಷ್ಟ ಗುಣಗಳು ಎದ್ದು ಕಾಣುತ್ತವೆ. ಈ ಪೈಕಿ ಕೆಲವು ಪರಸ್ಪರ ವಿರುದ್ಧವಾಗಿದ್ದು ಒಟ್ಟಿನಲ್ಲಿ ರದ್ದಾಗುವ ಸಾಧ್ಯತೆಯೂ ಇದೆ. ಇದು ಹೇಗೂ ಇರಲಿ : ಜಾತಕ-ಜೀವನ ನಡುವಿನ 'ವೈಜ್ಞಾನಿಕ' ಸಂಬಂಧ ಹೀಗೆ ಏರ್ಪಡುತ್ತದೆ. ಇಂಥ ಸಂಬಂಧಗಳ ಸಮುಚ್ಚಯವೇ ಫಲ ಜ್ಯೋತಿಷ್ಯ ಕುರಿತ ಆಕರಗ್ರಂಥ. ಶತಮಾನಗಳು ಉರುಳಿದಂತೆ ಆಕರಗ್ರಂಥಗಳೂ ಇವುಗಳಿಗೆ ವ್ಯಾಖ್ಯಾನ ವಿವರಣೆ ತಿದ್ದುಪಡಿಗಳೂ ಸಮೃದ್ಧವಾಗಿ ವರ್ಧಿಸಿದುವು.

ಅಂದಮೇಲೆ ಇಂದಿನ ಒಬ್ಬ ಫಲಜ್ಯೋತಿಷಿ ಮಾಡಬೇಕಾದ್ದೇನು ? ತನ್ನ ಪರಿಶೀಲನೆಗೆ ಬರುವ ಯಾವುದೇ ಜಾತಕವನ್ನು ಆಕರಗ್ರಂಥದಲ್ಲಿಯ ಯುಕ್ತದಾಖಲೆಗಳ ಜೊತೆ ಹೋಲಿಸಿ ಅಲ್ಲಿ ದೊರೆಯುವ ವಿವರಣೆ ವ್ಯಾಖ್ಯಾನಗಳಿಗೆ ಯಥಾಮತಿ ಅನುಭವ ಹಾಗೂ ಊಹ ಬೆಸೆದು 'ಜಾತಕ ಫಲ' ನುಡಿಯುವುದು. ಇದರಲ್ಲಿ ದೋಷಗಳು ಹಣುಕಿದರೆ ಅವುಗಳ ಮೂಲವನ್ನು ಜಾತಕದ ನಿಷ್ಕೃಷ್ಟತೆಯಲ್ಲಿ ಇಲ್ಲವೇ ಫಲಜ್ಯೋತಿಷಿಯ ಸಾಮರ್ಥ್ಯದಲ್ಲಿ ಕಾಣಬೇಕು. ಇವೆಲ್ಲವೂ ಸರಿಯಾಗಿವೆಯೆಂದು ತಪಾಸಣೆಯಿಂದ ಸ್ಥಿರೀಕೃತವಾದರೆ ಈ ದೋಷಗಳನ್ನು ನೂತನ ಸಂಶೋಧನಸಮಸ್ಯೆಯಾಗಿ ಸ್ವೀಕರಿಸಿ ಶಾಸ್ತ್ರವನ್ನು ಯುಕ್ತವಾಗಿ ಅಭಿವರ್ಧಿಸಬೇಕು.

## ಸ್ವಾಮಿ ವಿವೇಕಾನಂದರು ನೀಡಿರುವ ವೈಜ್ಞಾನಿಕ ವಿವರಣೆ

ಸ್ವಾಮಿ ವಿವೇಕಾನಂದರು ಮಾಡಿರುವ Man the Maker of Destiny (ಅದೃಷ್ಟದ ನಿರ್ಮಾಪಕ ಮಾನವ) ಎಂಬ ಭಾಷಣದ ಸಂಗ್ರಹಾನುವಾದ :

"ದಕ್ಷಿಣ ಭಾರತದಲ್ಲಿ ಅತಿಪ್ರಬಲವಾದ ಒಂದು ವಂಶವಿತ್ತು. ಬೇರೆ ಬೇರೆ ಕಾಲಗಳಲ್ಲಿ ಬಾಳಿದ ಗಣ್ಯವ್ಯಕ್ತಿಗಳ ಜನನ ಮುಹೂರ್ತಗಳನ್ನು ಆಧರಿಸಿ ಅವರ ಜಾತಕಗಳನ್ನು ತಯಾರಿಸುವುದು ಈ ವಂಶಜರ ವೃತ್ತಿ. ಇವನ್ನು ಓದಿ ಇವರು ಜಾತಕನ ಬಗೆಗಿನ ಪ್ರಮುಖ ಸಂಗತಿಗಳನ್ನು ಮುನ್ನುಡಿದರು, ಮತ್ತು ಇವುಗಳ ದಾಖಲೆ ಕಲೆಹಾಕಿದರು. ಕಾಲಾಂತರದಲ್ಲಿ, ಘಟನೆಗಳು ಜಮೆಯಾದಂತೆ. ಇವನ್ನು ದಾಖಲೆಗಳಲ್ಲಿಯ ವಿವರಗಳೊಂದಿಗೆ ಹೋಲಿಸಿ ನೋಡಿದರು. ಸಾವಿರವರ್ಷ ಪರ್ಯಂತ ಈ ತುಲನೆ ಮುಂದುವರಿದಾಗ ಅಲ್ಲಿ

ಹಲವಾರು ಹೊಂದಾಣಿಕೆಗಳು ಕಂಡುಬಂದುವು. ಇವನ್ನು ಸಾರ್ವತ್ರೀಕರಿಸಿ ಬೃಹತ್ಸಂಪುಟವೊಂದರಲ್ಲಿ ಸಂಗ್ರಹಿಸಿದರು. ಮುಂದೆ ಈ ವಂಶ ನಶಿಸಿ ಹೋಯಿತು. ಆದರೆ ಫಲಜ್ಯೋತಿಷಿಗಳ ದಂಡು ಮಾತ್ರ ಉಳಿಯಿತು. ಆ ಬೃಹತ್ಸಂಪುಟ ಇವರ ಸ್ವತ್ತು. ಫಲಜ್ಯೋತಿಷ್ಯ ಈ ತೆರನಾಗಿ ಅಸ್ತಿತ್ವಕ್ಕೆ ಬಂದಿರುವುದು ಸಾಧ್ಯ. ಹಿಂದೂಗಳನ್ನು ತೀವ್ರವಾಗಿ ಗಾಸಿಗೊಳಿಸಿರುವ ಕುರುಡು ನಂಬಿಕೆಗಳ ಪೈಕಿ ಅವರು ಫಲಜ್ಯೋತಿಷ್ಯದ ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಗೆ ಅತ್ಯಧಿಕ ಲಕ್ಷ್ಯಹರಿಸಿದುದೂ ಒಂದಾಗಿದೆ.

"ನಮ್ಮ ಚಿಂತನೆಯ ಪ್ರಕಾರ ಭಾರತಕ್ಕೆ ಫಲಜ್ಯೋತಿಷ್ಯ ತಂದವರು ಗ್ರೀಕರು. ಇವರು ಹಿಂದೂಗಳಿಂದ ಖಗೋಳವಿಜ್ಞಾನ ಪಡೆದು ಇದನ್ನು ತಮ್ಮ ಜೊತೆ ಒಯ್ದು ಯೂರೊಪಿಗೆ ತಲಪಿಸಿದರು. ಈ ಪರಸ್ಪರ ಪ್ರಭಾವವನ್ನು ಭಾರತದ ಪ್ರಾಚೀನ ಪವಿತ್ರ ಮಂದಿರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಇವು ನಿರ್ದಿಷ್ಟ ಜ್ಯಾಮಿತೀಯ ಆಲೇಖ್ಯಾನುಸಾರ ರಚಿತವಾಗಿವೆ, ಮತ್ತು ನಕ್ಷತ್ರಗಳು ನಿರ್ದಿಷ್ಟ ಸ್ಥಾನಗಳಿಗೆ ಬಂದಾಗ ನಿರ್ದಿಷ್ಟ ವಿಧಿಗಳನ್ನು ಆಚರಿಸಲು ಬದ್ಧವಾಗಿವೆ.

"ಭವಿಷ್ಯವನ್ನು ಅತ್ಯದ್ಭುತವಾಗಿ ಕಣಿನುಡಿದಿರುವ ಹಲವಾರು ಫಲಜ್ಯೋತಿಷಿಗಳನ್ನು ನೋಡಿದ್ದೇನೆ. ಆದರೆ ಅವರು ನಕ್ಷತ್ರಗಳನ್ನು ಆಧರಿಸಿ ಅಥವಾ ತತ್ಸದೃಶ ಕ್ರಿಯೆ ಎಸಗಿ ಈ ಯಶಸ್ಸು ಗಳಿಸಬಹುದೆಂಬ ಪೊಳ್ಳನ್ನು ನಾನಂತೂ ನುಂಗಲಾರೆ. ಹಲವಾರು ಸಂದರ್ಭಗಳಲ್ಲಿ ತೀರ ಸ್ಪಷ್ಟವಾಗಿಯೇ ಅದು ಮನೋಪಠನಜನ್ಯವಾಗಿತ್ತು. ಮುಂದೆ ಸಂಭವಿಸಲಿರುವುದನ್ನು ಕೆಲವೊಮ್ಮೆ ಪರಮಾಶ್ಚರ್ಯಕರವಾಗಿ ಕಣಿನುಡಿದಿರುವುದೂ ಉಂಟು. ಆದರೆ ಹೆಚ್ಚಿನ ಸನ್ನಿವೇಶಗಳಲ್ಲಿ ಅದು ಬರಿದೆ ಒಣಗುಲ್ಲು."

ಒಂದು ನಿದರ್ಶನ ನೋಡಿ. ಜ್ಯೋತಿಷಿ ಈಶ್ವರಯ್ಯನವರ ಪ್ರಕಾರ ('ಮಂಜುವಾಣಿ' ಜೂನ್ ೧೯೭೨ ಸಂಚಿಕೆ) ಸಿಂಹರಾಶಿಯವರ ಮಾಸಭವಿಷ್ಯ (೧-೬-೧೯೭೨ರಿಂದ ೩೦-೬-೧೯೭೨ರ ತನಕ) ಹೀಗಿದೆ :

"ರವಿಯ ಫಲ ಉತ್ತಮ. ಸ್ಥಾನಮಾನ ಸಿದ್ಧಿ. ಕಾರ್ಯ, ಉತ್ಸಾಹ. ಕುಜ ಅಶುಭ. ಕಾರ್ಖಾನೆ ಪ್ರವೃತ್ತಿಯವರಿಗೆ ಆತಂಕ, ಅಪವ್ಯಯ. ಬುಧ ಶುಭ. ಸಾಂಸಾರಿಕ ಇಷ್ಟ ಸಿದ್ಧಿ. ವಿದ್ಯಾಪ್ರವೃತ್ತಿಯವರಿಗೂ ಇಷ್ಟಾರ್ಥ ಸಿದ್ಧಿ. ಶುಕ್ರ ಶುಭ, ಸಾಂಸಾರಿಕ ಸುಖ. ವ್ಯಾಪಾರದಿಂದ ಅಧಿಕಲಾಭ.

ಮಂಗಲ ಕಾರ್ಯ ಪ್ರವೃತ್ತಿ. ವಾಹನಾದಿಗಳಿಂದ ಲಾಭ. ಪ್ರಬಲ ಗ್ರಹರು ಗಳಾದ ಗುರು-ಶನಿಗಳು ಶುಭವಾಗಿರುವುದರಿಂದ ಕಾರ್ಯಜಯ. ಎಲ್ಲ ತರ ಹದ ಅಡಚಣೆ ಆತಂಕಗಳು ನಿವಾರಣೆಯಾಗುವುವು.''

ಉಳಿದ ಹನ್ನೊಂದು ರಾಶಿಗಳ ಬಗೆಗಿನ ವರ್ಣನೆಗಳೂ ಇದೇ ಧಾಟಿ ಯಲ್ಲಿವೆ. ಎಲ್ಲವನ್ನೂ ತಾರ್ಕಿಕವಾಗಿ ಅಭ್ಯಸಿಸಿ ವಿಶ್ಲೇಷಿಸಿದಾಗ ತಿಳಿಯುವು ದೇನು ?

ಯಾವ ಖಚಿತ ಅರ್ಥವೂ ಇರದ ಹಲವಾರು ಪದಗಳ, ಪದಪುಂಜಗಳ ಹಾಗೂ ವಾಕ್ಯ ಸಮುದಾಯಗಳ ಗೋಜಲು. ಯಾರು ಹೇಗೆ ಬೇಕಾದರೂ ಅರ್ಥವಿಸಿ ವ್ಯಾಖ್ಯಾನಿಸಬಹುದಾದ ಹೇಳಿಕೆಗಳ ಸರಮಾಲೆ. ಭವಿಷ್ಯವಾಚಕರ ಬಂಡವಾಳವೇ ಇದು : ಗಹನ ಪದಪುಂಜಗಳನ್ನೂ ಭವ್ಯ ನಾಮಗಳನ್ನೂ ಶಾಸ್ತ್ರಗ್ರಂಥಗಳ ಹೆಸರುಗಳನ್ನೂ ಶಿಥಿಲವಾಗಿ ಹಣೆದು, ಬೇಕಾದರೆ, ಆಧುನಿಕ ವಿಜ್ಞಾನದ ಹಲವಾರು ಪಾರಿಭಾಷಿಕ ಪದಗಳನ್ನೂ ಯಥೋಚಿತವಾಗಿ ತುಂತು ರಿಸಿ ಕಟ್ಟಿರುವ ಅಸ್ಪಷ್ಟ ಉಕ್ತಿಗಳ ಶ್ರೀಮದ್ಗಂಭೀರ ಪದಸೌಧ ! ವ್ಯಾಖ್ಯಾನ ಕಾರರ ಕಲ್ಪದ್ರುಮ !

## ಫಲಜ್ಯೋತಿಷ್ಯ ಮತ್ತು ವಿಜ್ಞಾನ

ಫಲಜ್ಯೋತಿಷ್ಯ ಸೌಧದ ಅಡಿಪಾಯದಲ್ಲಿ ಖಗೋಳವಿಜ್ಞಾನ, ವೈಜ್ಞಾ ನಿಕ ವಿಧಾನ, ಮನೋವೈಜ್ಞಾನಿಕ ಊಹೆ ಮತ್ತು ಅನುಭಾವವಾಙ್ಮಯ ನಿಕಟವಾಗಿ ಬೆಸೆದುಕೊಂಡಿವೆ. ಇವು ನಿರ್ವಹಿಸುವ ಪಾತ್ರಗಳೇನೆಂದು ಈಗ ನೋಡೋಣ.

* **ಖಗೋಳವಿಜ್ಞಾನ.** ಇದರ ತಿರುಳು ಭೂಕೇಂದ್ರವಾದ : ಕೇಂದ್ರದಲ್ಲಿ ಸ್ಥಿರಭೂಮಿ ನೆಲಸಿದೆ, ನವಗ್ರಹಗಳು ಇದನ್ನು ಪರಿಭ್ರಮಿಸುತ್ತಿವೆ. ಕೇವಲ ಗಣಿತಗಣನೆಗಳ ದೃಷ್ಟಿಯಿಂದ ಈ ಭೌತವಾದರಿ ಖಂಡಿತವಾಗಿಯೂ ನಿಷ್ಕೃಷ್ಟ ಫಲಿತಾಂಶಗಳನ್ನು ನೀಡುತ್ತದೆ. ಉದಾಹರಣೆಗೆ—

ನಾನು ಮಡಿಕೇರಿಯಿಂದ ಹೊರಟು ಗಂಟೆಗೆ ಸರಾಸರಿ ೪೦ ಕಿಮೀ ವೇಗದಲ್ಲಿ ಪಯಣಿಸುತ್ತ ೩ ಗಂಟೆ ೨೪ ಮಿನಿಟುಗಳಲ್ಲಿ ಮಂಗಳೂರು ತಲಪು ತ್ತೇನೆ. ಹಾಗಾದರೆ ಮಡಿಕೇರಿಯಿಂದ ಮಂಗಳೂರಿನ ದೂರವೆಷ್ಟು ?

ಉತ್ತರ ೪೦ × ೩.೪ = ೧೩೬ ಕಿಮೀ

ಗಣಿತಗಣನೆಗಳ ದೃಷ್ಟಿಯಿಂದ ಈ ಫಲಿತಾಂಶ, ಮಂಗಳೂರು ನನ್ನನ್ನು ತಲಪುವ ಅಸಂಭವನೀಯ ಸನ್ನಿವೇಶಕ್ಕೆ ಸಮವಾಗುತ್ತದೆ : ಮಂಗಳೂರು ಗಂಟೆಗೆ ೪೦ ಕಿಮೀ ವೇಗದಲ್ಲಿ ೩ ಗಂಟೆ ೨೪ ಮಿನಿಟ್ ಕಾಲ ಚಲಿಸಿ ಮಡಿಕೇರಿ ಯಲ್ಲಿರುವ ನನ್ನನ್ನು ಸೇರುತ್ತದೆ. ಆದ್ದರಿಂದ ಮಂಗಳೂರು-ಮಡಿಕೇರಿ ದೂರ ೧೩೬ ಕಿಮೀ.

ಅದೇ ಉತ್ತರ. ಆದರೆ ವಾಸ್ತವತೆ ? ಮೊದಲನೆಯದು ಹೌದು. ಎರಡನೆಯದು ಅಲ್ಲ.

ಭೂಕೇಂದ್ರವಾದ ಗಣಿತೀಯವಾಗಿ ಸರಿಯಾದ ಫಲಿತಾಂಶಗಳನ್ನು ನೀಡಿದರೂ ವಾಸ್ತವತೆಯ ಯಥಾ ಪ್ರತಿಬಿಂಬ ಅದಲ್ಲ. ಇದರ ಜೊತೆಗೆ ಇನ್ನೂ ಆರು ಮುಖ್ಯ ತಥ್ಯಗಳು ಇಂದಿನ ನಮಗೆ ತಿಳಿದಿವೆ :

೧ ಸೂರ್ಯ ಒಂದು ನಕ್ಷತ್ರ—ಇದು ನಮ್ಮ ನಕ್ಷತ್ರ. ಇದು ಗ್ರಹ ಅಲ್ಲ.

೨ ಚಂದ್ರ ಒಂದು ಉಪಗ್ರಹ—ಇದು ನಮ್ಮ ಉಪಗ್ರಹ, ಇದು ಗ್ರಹ ಅಲ್ಲ.

೩ ರಾಹು ಮತ್ತು ಕೇತು ಕಾಲ್ಪನಿಕ ಬಿಂದುಗಳು. ಇವು ಗ್ರಹಗಳಲ್ಲ.

೪ ಭೂಮಿ ಒಂದು ಗ್ರಹ—ಇದು ನಮ್ಮ ಮನೆ ನಿಜ, ಆದರೆ ಇದು ವಿಶ್ವಕೇಂದ್ರವಲ್ಲ, ಸೌರವ್ಯೂಹದ ಕೇಂದ್ರವೂ ಅಲ್ಲ. ಭೂಕೇಂದ್ರವಾದದಲ್ಲಿ (ಅಂದರೆ ಫಲಜ್ಯೋತಿಷ್ಯದಲ್ಲಿ) ಇದನ್ನು ಸ್ಥಿರವೀಕ್ಷಣಮಂಚಿಕೆ ಎಂದು ಅಂಗೀ ಕರಿಸಲಾಗಿದೆಯೇ ವಿನಾ ಗ್ರಹ ಎಂದಲ್ಲ.

೫ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋ ಎನ್ನುವ ಮೂರು ಗ್ರಹ ಗಳಿವೆ. ಆದರೆ ಭೂಕೇಂದ್ರವಾದದಲ್ಲಿ ಇವುಗಳಿಗೆ ನೆಲೆ ಇಲ್ಲ.

೬ ಭೂಮಿಗೆ ಮಾತ್ರ ಚಂದ್ರ (ಉಪಗ್ರಹ) ಇರುವುದಲ್ಲ— ಕುಜ, ಗುರು, ಶನಿ ಮುಂತಾದ ಗ್ರಹಗಳಿಗೂ ಚಂದ್ರಗಳಿವೆ. ಭೂಕೇಂದ್ರವಾದದಲ್ಲಿ ಇವು ಉಲ್ಲೇಖಿತವಾಗಿಲ್ಲ.

ಆದ್ದರಿಂದ ಇಂದು ಫಲಜ್ಯೋತಿಷ್ಯದಲ್ಲಿ ಖಗೋಳವಿಜ್ಞಾನದ ಪಾತ್ರ ಏನಾದರೂ ಇದ್ದರೆ ಅದು ಕೇವಲ ಐತಿಹಾಸಿಕ ಸ್ವರೂಪದ್ದು, ಫಲ ಜ್ಯೋತಿಷ್ಯದ ಅಭಿವರ್ಧನೆಯನ್ನು ಪ್ರೇರಿಸಿತು ಎನ್ನುವಷ್ಟರ ಮಟ್ಟಿಗೆ ಮಾತ್ರ. ಇಂದಿನ ಖಗೋಳವಿಜ್ಞಾನದ ಅಡಿಪಾಯದ ಮೇಲೆ ಫಲಜ್ಯೋತಿಷ್ಯವನ್ನು ನಿಲ್ಲಿಸಲಾಗುವುದಿಲ್ಲ.

* **ವೈಜ್ಞಾನಿಕ ವಿಧಾನ.** ಇದು ಒಂದು ಉಪಕರಣ ಮಾತ್ರ. ವಿಜ್ಞಾನದಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರ ಅರಸುವಾಗ ಇದು ಮೈದಳೆಯಿತಾದರೂ ಇದರ ಅನ್ವಯ ಮಾತ್ರ ಸಾರ್ವತ್ರಿಕ— ವಿಜ್ಞಾನೇತರ ಸಮಸ್ಯೆಗಳಿಗೂ ಇದನ್ನು ಅನ್ವಯಿಸಿ ಸಮರ್ಪಕ ಪರಿಹಾರಗಳನ್ನು ಪಡೆಯಬಹುದು. ಅಂದ ಮಾತ್ರಕ್ಕೆ ಇವು (ವೈಜ್ಞಾನಿಕ ವಿಧಾನದ ಅನ್ವಯದಿಂದ ಪರಿಹರಿಸಲಾದ ಸಮಸ್ಯೆಗಳೆಲ್ಲವೂ) ವಿಜ್ಞಾನಗಳೆನ್ನಿಸುವುದಿಲ್ಲ.

ಆದ್ದರಿಂದ ಫಲಜ್ಯೋತಿಷ್ಯವನ್ನು ವಿಜ್ಞಾನಪ್ರಕಾರವೆಂದು ಪರಿಗಣಿಸಲಾಗುವುದಿಲ್ಲ.

* **ಮನೋವೈಜ್ಞಾನಿಕ ಊಹೆ.** ಈ ಸಮಾಸಪದದ ಗಾಂಭೀರ್ಯವೇನೇ ಇರಲಿ, ಇದರಲ್ಲಿ ಊಹೆಯ ಪಾತ್ರವೇ ಮುಖ್ಯವಾದದ್ದು. ಏಕೆಂದರೆ 'ಮನೋವಿಜ್ಞಾನ,' 'ಮನೋವಿಶ್ಲೇಷಣೆ,' 'ಮನೋವಾಚನ' ಮುಂತಾದ ಅಸ್ಪಷ್ಟ ದಿವ್ಯ ಶ್ರೀಮದ್ಗಾಂಭೀರ್ಯ ನಿರೂಪಣೆಗಳ ತಿರುಳಿನಲ್ಲಿ ಹುದುಗಿರುವುದು ಗಾಢ ಅಜ್ಞಾನ. ಇನ್ನು ಊಹೆ ? ಇದು ಏರಬಲ್ಲ ಅಥವಾ ವಿಸ್ತರಿಸಬಲ್ಲ ವ್ಯಾಪ್ತಿಗೆ ಮಿತಿಯೇ ಇಲ್ಲ. ಆದ್ದರಿಂದ ಫಲಜ್ಯೋತಿಷ್ಯದ ವ್ಯಾವಹಾರಿಕ ರಂಗದಲ್ಲಿ ಇದು ಶುದ್ಧ ಒರಟು ! ಪರಿಶುದ್ಧ ಗಫಾ ! ಪರಿಪೂರ್ಣ ಉಡಾಫೆ !

ಅಂದಮೇಲೆ ಫಲಜ್ಯೋತಿಷ್ಯದ ಸಂದರ್ಭದಲ್ಲಿ ಮನೋವಿಜ್ಞಾನದ ಪಾತ್ರ ಏನೂ ಇಲ್ಲ ಎಂಬುದು ಸ್ಪಷ್ಟ.

* **ಅನುಭಾವವಾಙ್ಮಯ.** ಫಲಜ್ಯೋತಿಷಿಯ ಅಂತಿಮ ಆಶ್ರಯವೇ ಇದು ! ಪ್ರಾಚೀನ ಪವಿತ್ರ ಗ್ರಂಥಗಳು, ಪುರಾಣಪ್ರವಚನಗಳು,ಗೇಯಶ್ಲೋಕಗಳು, ಋಷಿ ವಾಕ್ಯಗಳು— ವಿಶ್ವದ ತ್ರಿಕಾಲ ಪ್ರವರ್ಧನೆಗಳೆಲ್ಲವನ್ನೂ ಸೂತ್ರರೂಪಗಳಲ್ಲಿ ಸೆರೆಹಿಡಿದಿಟ್ಟಿರುವ ಅದ್ಭುತ ಅನುಭಾವವಾಙ್ಮಯಾರ್ಣವವೇ ಈತನ ಮುಂದೆ ಚೆಲ್ಲಿಕೊಂಡಿದೆ. ಯಾವುದೇ ಅಸಂಬದ್ಧ ತೀರ್ಮಾನವನ್ನು ಸಮರ್ಥಿಸಲು ಅಂತೆಯೇ ಯಾವುದೇ ತರ್ಕಬದ್ಧ ತೀರ್ಮಾನವನ್ನು ತಿರಸ್ಕರಿಸಲು ನೆನೆದಲ್ಲಿ ಒದಗುವ ಕಲ್ಪದ್ರುಮವೇ ಇದು !

ಆದ್ದರಿಂದ 'ಅವರಿವರ ನಂಬುಗೆಯ ಮಳಲರಾಶಿಯ ಮೇಲೆ' ಕಟ್ಟಿರುವ ಫಲಜ್ಯೋತಿಷ್ಯ ಸರ್ವಥಾ ವಿಶ್ವಾಸಾರ್ಹವಾದುದಲ್ಲ. (ಫಲಜ್ಯೋತಿಷಿಯ 'ಬಾಳ ಮನೆಯನು ಮುಗಿಲಿಗೆತ್ತರಿಸಲು' ಇದು ನೆರವಾಗುವುದೆಂಬುದು ಅಲಾಯಿದ !)

## ವಿವೇಕಾನಂದ ವಾಣಿ

ಇದೇ ಹಿಂದೆ ಬರೆದಿರುವ ವಿವೇಕಾನಂದವಾಣಿಯ ಮುಂದುವರಿಕೆ :

ಇದೊಂದು ಹಳೆಯ ಕತೆ. ನಾಡಿನ ದೊರೆಯಲ್ಲಿಗೆ ಒಬ್ಬ ಫಲಜ್ಯೋತಿಷಿ ಹೋಗಿ "ಇನ್ನು ಆರು ತಿಂಗಳ ಒಳಗೆ ನೀನು ಸಾಯಲಿರುವೆ" ಎಂದ.

ಸಹಜವಾಗಿಯೇ ಅರಸ ಭಯವಿಹ್ವಲನಾದ—ಆ ಗಳಿಗೆಯೇ ಸತ್ತು ಹೋಗುವನೋ ಎಂಬಂಥ ಸ್ಥಿತಿ. ಈತನ ಬುದ್ಧಿವಂತ ಮಂತ್ರಿ "ಫಲ ಜ್ಯೋತಿಷಿಗಳೆಲ್ಲರೂ ಮೂರ್ಖರು" ಎಂದು ಸಾರಿ ಸಾರಿ ಹೇಳಿದರೂ ರಾಜ ನಲ್ಲಿ ನೆಮ್ಮದಿ ಮೂಡಲಿಲ್ಲ. ಇನ್ನೇನು ಹಾದಿ ಎಂದು ಯೋಚಿಸಿದ ಮಂತ್ರಿ ಆ ಫಲಜ್ಯೋತಿಷಿಯನ್ನು ಅರಮನೆಗೆ ಬರಮಾಡಿ ಪ್ರಶ್ನಿಸಿದ "ನಿನ್ನ ಗಣನೆ ಗಳೆಲ್ಲವೂ ನಿಷ್ಕೃಷ್ಟವಾಗಿವೆಯೇ ?

ಫಲಜ್ಯೋತಿಷಿ "ಹೌದು ಸ್ವಾಮೀ ! ಇಲ್ಲಿ ಯಾವ ದೋಷವೂ ನುಸು ಳಿರುವುದು ಅಸಾಧ್ಯ."

ಆದರೂ ಮಂತ್ರಿಯು ಸಮಾಧಾನಾರ್ಥ ಆ ಗಣನೆಗಳನ್ನು ಮಗು ದೊಮ್ಮೆ ಮಾಡಿ "ಗಣನೆಗಳು ಸರಿಯಾಗಿವೆ. ಭವಿಷ್ಯವಾಚನ ಕರಾರು ವಾಕ್ಕಾಗಿದೆ" ಎಂದು ದೃಢೀಕರಿಸಿದ.

ಅರಸನ ಮುಖ ಬಿಳಿಚಿಕೊಂಡಿತು. ಫಲಜ್ಯೋತಿಷಿಗೆ ಮಂತ್ರಿ ಸವಾಲೆ ಸೆದ "ನಿನ್ನ ಮರಣ ಎಂದು ಸಂಭವಿಸಲಿದೆ ಎಂಬುದನ್ನು ಗಣಿಸಿರುವೆಯಾ ?"

"ಹೌದು. ಇನ್ನು ಹನ್ನೆರಡು ವರ್ಷಗಳಲ್ಲಿ."

ಆ ಕ್ಷಣ ಮಂತ್ರಿ ತನ್ನ ಕರವಾಲ ಹಿರಿದು ಜ್ಯೋತಿಷಿಯ ತಲೆ ತರಿದು ದೊರೆಗೆ ಹೇಳಿದ "ಈ ಸುಳ್ಳನನ್ನು ನೋಡಿದೆಯಾ ? ಈ ಗಳಿಗೆಯೇ ಈತ ಮಡಿದಿದ್ದಾನೆ !"

ಸಂದೇಶವೇನು ? ಫಲಜ್ಯೋತಿಷ್ಯವನ್ನು ನಂಬತಕ್ಕದ್ದಲ್ಲ, ಅವಲಂಬಿಸ ತಕ್ಕದ್ದಲ್ಲ, ಪುರಸ್ಕರಿಸತಕ್ಕದ್ದೂ ಅಲ್ಲ.

## ನಿಸರ್ಗದ ಜ್ಞೇಯನಿಷ್ಠ ನಿಕಷ

ಯಾವುದೇ ವಾದ ಎಷ್ಟೇ ತರ್ಕಬದ್ಧವಾಗಿದ್ದರೂ ಮಾಹಿತಿಗಳಿಂದ ಪುಷ್ಟೀಕೃತವಾಗಿದ್ದರೂ ಸಂಗತ ಸುಂದರವಾಗಿದ್ದರೂ ಆದರ ಮಂದಿರ ಅಥವಾ

ಸಮರ್ಥಿತ ನಿರ್ಧರಿತವಾಗುವುದು ಪ್ರಯೋಗದ ಅತಿ ಕಠಿಣ ಮತ್ತು ಜ್ಞೇಯ ನಿಷ್ಠ ನಿಕಷದಲ್ಲೇ. ವಿಜ್ಞಾನದ ಎಲ್ಲ ಅಂಗೀಕೃತ ಸಿದ್ಧಾಂತಗಳೂ ಈ ಅಗ್ನಿ ಪರೀಕ್ಷೆಯಲ್ಲಿ ಉತ್ತೀರ್ಣವಾದಂಥವು. ಇದರಲ್ಲಿ ಉತ್ತೀರ್ಣವಾಗದವು ಇತಿಹಾಸದ ಗತಸ್ತರಗಳಲ್ಲಿ ಪಳೆಯುಳಿಕೆಗಳಾಗಿ ಮಾತ್ರ ಉಳಿದಿರುತ್ತವೆ. ಋತದ ಯಥಾಚಿತ್ರಣವಾಗುವ ದಿಶೆಯಲ್ಲಿ ಹಾದಿ ಕಡಿಯುತ್ತಿರುವ ವಿಜ್ಞಾನದ ಅಭಿವರ್ಧನೆಯಲ್ಲಿ ಇದರ ಪಾತ್ರವಿತ್ತೆಂಬ ಕಾರಣದಿಂದ ಇದು ಶಾಶ್ವತ ಸತ್ಯ ವಾಗದು. ಭೂಕೇಂದ್ರವಾದ ಇದಕ್ಕೊಂದು ಜ್ವಲಂತ ನಿದರ್ಶನ.

ಜೀವನವೆಂದರೆ ವಿಜ್ಞಾನವೊಂದೇ ಅಲ್ಲ, ಆಗಬೇಕಾಗಿಯೂ ಇಲ್ಲ. ತೊಡಕು ಹಣುಕುವುದು "ಫಲಜ್ಯೋತಿಷ್ಯವೂ ಒಂದು ವಿಜ್ಞಾನ" ಎಂದು ಇದರ ಆರಾಧಕರು ಘೋಷಿಸುವಾಗ, ಮತ್ತು ತಮ್ಮ ಘೋಷಣೆಯ ಸಮರ್ಥನೆಗೆ ಅಸಂಗತ, ಅತಾರ್ಕಿಕ ಮತ್ತು ಅಸಂದರ್ಭ ವಾದಗಳನ್ನು ಮಂಡಿ ಸುವಾಗ. ಈ ಎಲ್ಲ ಕು-ವಾದಗಳೂ ಅಂತಿಮವಾಗಿ ಒಂದೇ ಮೂಲ ಪರಿ ಕಲ್ಪನೆಯ ವಿಭಿನ್ನ ಶಾಖೆಗಳು.

ಹವಾವಿಜ್ಞಾನ, ವಿಮಾವಿಜ್ಞಾನ, ಜನಗಣತಿವಿಜ್ಞಾನ, ಸಂಭಾವ್ಯತಾ ವಿಜ್ಞಾನ ಮೊದಲಾದವುಗಳಂತೆ ಫಲಜ್ಯೋತಿಷ್ಯವೂ ಒಂದು ಅನಿಷ್ಕೃಷ್ಟ ವಿಜ್ಞಾನ. ಅವೆಲ್ಲವುಗಳ ತಳದಲ್ಲಿರುವಂತೆ ಇದರ ತಳದಲ್ಲಿಯೂ ಇರುವುದು ಸಂಖ್ಯಾಕಲನವಿಜ್ಞಾನ. ಹವೆಯ ಭವಿಷ್ಯ ವರ್ತನೆಗಳನ್ನು ಕರಾರುವಾಕ್ಕಾಗಿ ನುಡಿಯುವುದು ಸಾಧಿಸಿದೆಯೇ ? ಜನರ ಆಯುರ್ನಿರೀಕ್ಷೆಗಳಿಗೆ ಖಚಿತ ಉತ್ತರಗಳಿವೆಯೇ ? ಹವಾ ಮುನ್ಸೂಚನೆ ಪ್ರಕಾರ ಬಿಸಿಲು ರಣಗುಟ್ಟುತ್ತಿರ ಬೇಕಾದ ಗಳಿಗೆಯಲ್ಲೇ ಬಿರುಮಳೆ ಸುರಿದ ನಿದರ್ಶನಗಳಿಲ್ಲವೇ ? ಇವೆಲ್ಲವೂ ಈ ವಿಜ್ಞಾನಪ್ರಕಾರಗಳಲ್ಲಿಯ ದೋಷಗಳು—ನಿಸರ್ಗದ ವರ್ತನೆಯನ್ನು ಮುನ್ನುಡಿಯುವಲ್ಲಿ ಪ್ರಕಟವಾದ ವೈಫಲ್ಯಗಳು. ಇಂಥ ಸಂದರ್ಭಗಳಲ್ಲಿ ವಿಜ್ಞಾನಿಗಳು ಹೇಳುವುದೇನು ? "ವಿಜ್ಞಾನದಲ್ಲಿ ದೋಷವಿಲ್ಲ. ಆದರೆ ಅದನ್ನು ನಾವು ಅನ್ವಯಿಸಿದ ವಿಧಾನ ಪರಿಪೂರ್ಣವಾಗಿಲ್ಲ. ಇನ್ನಷ್ಟು ಸುಧಾ ರಣೆ ಮಾಡಬೇಕು, ಸಂಶೋಧನೆ ಕೈಗೊಳ್ಳಬೇಕು." ಜನ ಮತ್ತು ಸರ್ಕಾರ ಈ ವಿವರಣೆಯನ್ನು ಒಪ್ಪುತ್ತಾರೆ. ಫಲಜ್ಯೋತಿಷ್ಯದ ಪ್ರಕಾರ ಕಣಿನುಡಿದ ಭವಿಷ್ಯವನ್ನಾದರೂ ಇದೇ ರೀತಿ ಪರಿಗಣಿಸಬೇಕು. ದೋಷ ಎದುರಾದಾಗ— ಫಲಜ್ಯೋತಿಷಿಯ ಭವಿಷ್ಯವಾಣಿಯ ಪ್ರಕಾರ ಘಟನೆಗಳು ಸಂಭವಿಸದಾಗ—

ಅದರ ಕಾರಣವನ್ನು ಅರಸಲು ಸಂಶೋಧನೆ ನಡೆಸಬೇಕು, ಭವಿಷ್ಯವಾಚನದ ಆಯುಧಗಳನ್ನು ಹೆಚ್ಚು ಮೊನಚುಗೊಳಿಸಬೇಕು, ಸಮಗ್ರವಾಗಿ ಫಲ ಜ್ಯೋತಿಷ್ಯವನ್ನು ಅಭಿವೃದ್ಧಿಪಡಿಸಬೇಕು. ಆದರೆ ವಿಜ್ಞಾನಿಗಳಾಗಲೀ ಸರ್ಕಾರ ವಾಗಲೀ ಇಂಥ ರಚನಾತ್ಮಕ ದೃಷ್ಟಿಧೋರಣೆ ತಳೆಯುವುದೇ ಇಲ್ಲ. "ಫಲ ಜ್ಯೋತಿಷ್ಯ ಹುಸಿ ಹಸಿ ಹೊಸ ವಂಚನೆ. ಇದನ್ನು ಕಂಬಿ ಗೂಟ ಡೇರೆ ಸಹಿತ ಬಿಸಾಡುವುದೊಂದೇ ಸರಿಯಾದ ಕ್ರಮ" ಎನ್ನುತ್ತಾರೆ. ವಿಜ್ಞಾನಿಗಳ ಈ ಅವಿಜ್ಞಾನವನ್ನೇನೆನ್ನೋಣ ? ತಮಗೊಂದು ನೀತಿ, ಅನ್ಯರಿಗೊಂದು ರೀತಿ ! ತಮ್ಮ ವೈಫಲ್ಯ ವೈಫಲ್ಯವಲ್ಲ, ಸಫಲತೆಯೆಡೆಗಿನ ಪ್ರಯತ್ನ ; ಇತರರ ವೈಫಲ್ಯವಾದರೋ ಪೂರ್ತಿ ಸೋಲೇ, ಯಶಸ್ಸಿಗೆ ಅವಕಾಶವೇ ಇರದ ಪತನ ! ಖಂಡಿತವಾಗಿಯೂ ಇದು ವೈಜ್ಞಾನಿಕ ಮನೋಧರ್ಮ ಇರುವವರ ಲಕ್ಷಣ ವಲ್ಲ. ಆದ್ದರಿಂದ, ಮೊದಲನೆಯದಾಗಿ, ಫಲಜ್ಯೋತಿಷ್ಯವನ್ನೂ ಒಂದು ವಿಜ್ಞಾನಪ್ರಕಾರವೆಂದು ಅಂಗೀಕರಿಸಬೇಕು, ಮತ್ತು ಎರಡನೆಯದಾಗಿ. ವಿಜ್ಞಾನಪ್ರಕಾರಗಳಲ್ಲಿಯಂತೆಯೇ ಇದರಲ್ಲಿಯೂ ಸಂಶೋಧನೆಗೆ ಅವಕಾಶ ಕಲ್ಪಿಸಿಕೊಡಬೇಕು.

ಯಾವುದೇ ಒಂದು ಚಿಂತನಪ್ರಕಾರ ವಿಜ್ಞಾನವೋ ಅಲ್ಲವೋ ಆದ್ದ ರಿಂದ ಅದು ನಿಸರ್ಗದ ಒಂದು ದೃಶ್ಯವನ್ನು ಪ್ರತಿಬಿಂಬಿಸುವ ಕನ್ನಡಿಯೋ ಅಲ್ಲವೋ ಎಂದು ಅಂತಿಮವಾಗಿ ನಿರ್ಧಾರಿತವಾಗುವುದು ಪ್ರಯೋಗದ 'ರಣ ರಂಗದಲ್ಲಿ.' ಫಲಜ್ಯೋತಿಷ್ಯ ಕುರಿತಂತೆ ನಾವು ಮಾಡಬಹುದಾದ ಎರಡು ಮುಖ್ಯ ಪ್ರಯೋಗಗಳಿವು :

* "ಇಂಥ ಗ್ರಹ ಇಂಥ ಮನೆಯಲ್ಲಿದ್ದರೆ ಆ ವ್ಯಕ್ತಿಗೆ ಇಂಥ ಫಲ." ಇದು ಫಲಜ್ಯೋತಿಷ್ಯದಲ್ಲಿ ಕೇಳಿಬರುವ ಒಂದು ಧಾಟಿ.

ಅಂದ ಮೇಲೆ ಗ್ರಹ-ಮನೆ-ವ್ಯಕ್ತಿ ಸಂಬಂಧವನ್ನು ಪ್ರಾಯೋಗಿಕವಾಗಿ ಪರೀಕ್ಷಿಸಬಹುದೆಂದಾಯಿತು. ಉದಾಹರಣೆಗೆ "ಗಾಳಿಯಾಡದ ಮತ್ತು ಹೊಗೆ ಕವಿದ ಕೊಠಡಿಯೊಳಗೆ ನಿದ್ರಿಸುವಾತನಿಗೆ ತಲೆನೋವು ಬರುವುದು" ಎಂದಾಗ ಕೊಠಡಿಯ ಪರಿಸ್ಥಿತಿ, ವ್ಯಕ್ತಿ ಮತ್ತು ವ್ಯಾಧಿ ನಡುವೆ ಕಾರ್ಯ-ಕಾರಣ ಸಂಬಂಧ ಕಲ್ಪಿಸಬಹುದಲ್ಲವೇ ?

*" ಈ ವ್ಯಕ್ತಿಯ ಕಷ್ಟ ಕಾರ್ಪಣ್ಯಗಳನ್ನು ಗಮನಿಸುವಾಗ ಈತನ ಜಾತಕ ದಲ್ಲಿ ಕ್ರೂರಗ್ರಹಗಳ ಬಾಧೆ ತೀವ್ರವಾಗಿರಬೇಕೆನಿಸುತ್ತದೆ." ಇದು ಫಲ ಜ್ಯೋತಿಷ್ಯದಲ್ಲಿ ಕೇಳಿಬರುವ ಇನ್ನೊಂದು ಧಾಟಿ.

ಅಂದ ಮೇಲೆ ವ್ಯಕ್ತಿಯ ತಾಪತ್ರಯ–ಜಾತಕ–ಗ್ರಹಸ್ಥಾನ ಸಂಬಂಧ ವನ್ನು ಪ್ರಾಯೋಗಿಕವಾಗಿ ಪರೀಕ್ಷಿಸಬಹುದೆಂದಾಯಿತು. ಉದಾಹರಣೆಗೆ "ಸಾವು ನೋವುಗಳನ್ನು ಮತ್ತೆ ಮತ್ತೆ ಎದುರಿಸಿದಾತನ ಮನಃಸ್ವಾಸ್ಥ್ಯ ಕೆಡುತ್ತದೆ" ಎಂದಾಗ ಮಾನಸಿಕ ಅಸ್ವಾಸ್ಥ್ಯ, ವ್ಯಕ್ತಿ ಮತ್ತು ಸಾವು ನೋವು ಗಳ ನಡುವೆ ಕಾರ್ಯ–ಕಾರಣ ಸಂಬಂಧ ಕಲ್ಪಿಸಬಹುದಲ್ಲವೇ ?

ಗ್ರಹ–ಮನೆ–ವ್ಯಕ್ತಿ ಸಂಬಂಧವನ್ನಾಗಲೀ ವ್ಯಕ್ತಿ–ಮನೆ–ಗ್ರಹ ಸಂಬಂಧ ವನ್ನಾಗಲೀ ಸ್ಥಾಪಿಸಲು ಪ್ರಯತ್ನಿಸುವ ಮೊದಲು ಗ್ರಹ ಮತ್ತು ಮನೆ ಎಂದರೇನೆಂದು ನೋಡೋಣ.

## ಗ್ರಹ, ಗೃಹ

ಗ್ರಹವೆಂದರೆ ಈ ಹಿಂದೆ ಪ್ರಸ್ತಾವಿಸಿರುವ ನವಗ್ರಹಗಳ ಪೈಕಿ ಯಾವುದೇ ಒಂದು.




ಚಿತ್ರ ೬. ರಾಶಿಚಕ್ರವನ್ನು ನಿರ್ಧರಿಸುವ ೧೨ ನಕ್ಷತ್ರ ಚಿತ್ರ (ಪುಂಜ) ಗಳ ಪೈಕಿ ಒಂದು. ಇದು ವೃಶ್ಚಿಕ ರಾಶಿ ಹೆಸರಿಗೂ (ಚೇಳು)

ಆಕಾರಕ್ಕೂ ನಡುವೆ ತುಸುವಾದರೂ ಸಾಮ್ಯವಿರುವುದು ಇದೊಂದರಲ್ಲೇ. ಖಗೋಳದಲ್ಲಿ ಗುರುತಿಸಿ, ಹೆಸರಿಸಿ, ಸ್ಪಷ್ಟ ಗಡಿ ನಿರ್ಧರಿಸಲ್ಪಟ್ಟಿರುವ ೮೮ ಪುಂಜಗಳಿವೆ—೮೮ ವಿವಿಧ ಆಕಾರ ವಿಸ್ತಾರ ವಕ್ರತೆಗಳಿರುವ ಚಿಪ್ಪುಗಳನ್ನು ಅಡಕವಾಗಿ ಹೊದೆಸಿ ಅಥವಾ ನೇಯ್ದು ಆಕಾಶದ ನಯಗೋಳ ಮಾಡನ್ನು ಪೂರ್ತಿಗೊಳಿಸಲಾಗಿದೆಯೋ ಎಂಬಂತೆ. ಒಂದೊಂದು ಚಿಪ್ಪು ಒಂದೊಂದು ಪುಂಜ. ಇದೊಂದು ಮಿಥ್ಯಾ ಚಿತ್ರ—ದೃಕ್‌ಭ್ರಮೆ, ನಮ್ಮ ಕಣ್ಣುಗಳ ಸಾಮರ್ಥ್ಯ ಮಿತಿ, ವಾಯುಮಂಡಲ ನಮಗೆ ತೊಡಿಸಿರುವ ಕಣ್ಕಪ್ಪಡಿ, ಹಾಗೂ ವಿಶ್ವದ (ಆಕಾಶ) ಅಗಾಧತೆ ಒಟ್ಟಾಗಿ ನಮ್ಮ ಮೇಲೆ ಬೀರಿರುವ ಸಾಮೂಹಿಕ ಸಾರ್ವಕಾಲಿಕ ಹಾಗೂ ಭೂತಳದಲ್ಲಿ ಸಾರ್ವದೈಶಿಕ ಪ್ರಭಾವ ! ಎಂಬತ್ತೆಂಟೇ ಏಕೆ ? ನಾಗರಿಕತೆಯ ಮುನ್ನಡೆಯಲ್ಲಿ ಈ ಸಂಖ್ಯೆ ಕ್ರಮೇಣ ಮೈವಡೆಯಿತೇ ಹೊರತು ಆಕಾಶದಲ್ಲಿ ಸೃಷ್ಟಿಕರ್ತ (?) ಅಷ್ಟು ಚಿಪ್ಪುಗಳನ್ನು ಕಸೂತಿ ನೇಯ್ದುದರಿಂದ ಅಲ್ಲ. ತುಲಾರಾಶಿ ವೃಶ್ಚಿಕದ ಪಶ್ಚಿಮಕ್ಕೂ ಧನುರಾಶಿ ಪೂರ್ವಕ್ಕೂ ಇವೆ.

ಗೃಹವೆಂದರೆ ಗ್ರಹಕುಂಡಲಿಯಲ್ಲಿಯ ೧೨ ಮನೆಗಳ ಪೈಕಿ ಯಾವುದೇ ಒಂದು. ಒಂದೊಂದು ಮನೆ ಅಥವಾ ಗೃಹ ಒಂದೊಂದು ನಕ್ಷತ್ರರಾಶಿಯನ್ನು ಪ್ರತಿನಿಧಿಸುತ್ತದೆ.

ನಕ್ಷತ್ರರಾಶಿ ಎಂದರೇನು ?

ಆಕಾಶದ ನೀಲ ಮಾಡಿಗೆ ಅಂಕಿತವಾಗಿರುವಂತೆ ಕಾಣುವ ನಕ್ಷತ್ರರಂಗವಲ್ಲಿಗಳನ್ನು ೮೮ ವಿಭಿನ್ನ ಗುಂಪುಗಳಾಗಿ ವಿಂಗಡಿಸಿ ಅವುಗಳಿಗೆ ಅಷ್ಟು ಹೆಸರುಗಳನ್ನು ಕೊಡಲಾಗಿದೆ—ಯಾವುದೇ ನಗರವನ್ನು ವಿವಿಧ ಮೊಹಲ್ಲಾಗಳಾಗಿ ವಿಭಾಗಿಸಿ ಹೆಸರಿಸುವಂತೆ. ಇವೇ ನಕ್ಷತ್ರಪುಂಜಗಳು. ಉದಾಹರಣೆಗೆ ಸಪ್ತರ್ಷಿ ಮಂಡಲ, ಕಿನ್ನರ, ತ್ರಿಶಂಕು, ಮಹಾವ್ಯಾಧ, ಕುಂತೀ ಮುಂತಾದವು. ಅಂದರೆ ಆಕಾಶಗೋಳಕ್ಕೆ ೮೮ ವಿವಿಧ ಆಕಾರ/ವಿಸ್ತಾರಗಳ ನಕ್ಷತ್ರಪುಂಜಗಳನ್ನು ಹೊದೆಸಿದೆ ಎಂದರ್ಥ.

ಈ ಗೋಳ ಪರದೆಯ ಮೇಲೆ ನವಗ್ರಹಗಳು ತೀರ ಇಕ್ಕಟ್ಟಾದ ಒಂದು ಪಟ್ಟಿಗೆ ಸೀಮಿತವಾಗಿರುವಂತೆ ನಮಗೆ ಭಾಸವಾಗುತ್ತದೆ. ಸಹಜವಾಗಿ, ನಮ್ಮ




ಚಿತ್ರ ೭. ಆಕಾಶದ ಉತ್ತರ ಇಳಿಜಾರಿನಲ್ಲಿ ಗುರುತಿಸಬಹುದಾದ ಎರಡು ಪ್ರಮುಖ ನಕ್ಷತ್ರ ಪುಂಜಗಳು ಸಪ್ತರ್ಷಿಮಂಡಲ ಮತ್ತು ಕುಂತೀ. ಪ್ರಸಕ್ತ ಚಿತ್ರದಲ್ಲಿ ಇವು ಅನುಕ್ರಮವಾಗಿ ಉತ್ತರ–ಪಶ್ಚಿಮ ಮತ್ತು ಉತ್ತರ–ಪೂರ್ವ ಇಳಿಜಾರುಗಳಲ್ಲಿವೆ. ಖಗೋಳ ಪೂರ್ವ–ಪಶ್ಚಿಮ ದಿಶೆಯಲ್ಲಿ ಆವರ್ತಿಸಿದಂತೆ ಇವು ಸ್ಥಾನಪಲ್ಲಟಗೊಂಡು ಸಪ್ತರ್ಷಿಮಂಡಲ ಉತ್ತರ–ಪೂರ್ವ ಇಳಿಜಾರಿಗೂ ಕುಂತೀ ಉತ್ತರ–ಪಶ್ಚಿಮ ಇಳಿಜಾರಿಗೂ ಬರುತ್ತವೆ. ಈ ನಿರಂತರ ಆವರ್ತನೆ ಅಥವಾ ಪರಿಕ್ರಮಣದಲ್ಲಿ ಧ್ರುವ ನಕ್ಷತ್ರ ಮಾತ್ರ ಸದಾ ನಿಶ್ಚಲವಾಗಿರುತ್ತದೆ. ಕುಂತೀ ಪುಂಜದ (M–ಆಕಾರದ) ಪೂರ್ವ ಕೋನದ ಸಮದ್ವಿಭಾಜಕ ಧ್ರುವನಕ್ಷತ್ರದ ಮೂಲಕ ಸಾಗುತ್ತದೆ. ಅಂತೆಯೇ ಸಪ್ತರ್ಷಿಮಂಡಲದ ಪುಲಹ–ಕ್ರತು (ಚಿತ್ರದಲ್ಲಿ ಕೆಳಗಿನ ಎರಡು ನಕ್ಷತ್ರಗಳು) ರೇಖೆ ಕೂಡ.

ದೃಷ್ಟಿಯಿಂದ, ಈ ಪಟ್ಟಿಗೆ ಪ್ರಾಮುಖ್ಯ ಒದಗಿತು — ಇದನ್ನು ರೂಪಿಸುವ ನಕ್ಷತ್ರಪುಂಜಗಳಿಗೆ ಕೂಡ. ಇವೇ ದ್ವಾದಶ ನಕ್ಷತ್ರ ರಾಶಿಗಳು. ಆದ್ದರಿಂದ ಈ ಪಟ್ಟಿಗೆ ರಾಶಿಚಕ್ರವೆಂಬ ಹೆಸರು ಬಂದಿತು. ಹೀಗೆ ರಾಶಿಯೂ ಮೂಲತಃ ನಕ್ಷತ್ರ ಪುಂಜವೇ.

ಯಾವುದೇ ಪುಂಜವನ್ನು ರೂಪಿಸುವ ಬಿಡಿ ನಕ್ಷತ್ರಗಳ ನಡುವೆ ಏನಾ

ದರೂ ಭೌತ ಸಂಬಂಧವಿದೆಯೇ ? ಉದಾಹರಣೆಗೆ, ಬಿಡಿ ಕಲ್ಲುಗಳನ್ನು ಒಂದು ಆಲೇಖ್ಯಾನುಸಾರ ಅಳವಡಿಸಿ ಕಟ್ಟಿರುವ ಕಟ್ಟಡ. ಇದರಲ್ಲಿ ತಳ ಪಾಯದ ಕಲ್ಲಿಗೂ ಗೋಪುರದ ಕಲ್ಲಿಗೂ ನಡುವೆ ಖಂಡಿತವಾಗಿಯೂ ಭೌತ ಸಂಬಂಧ ಉಂಟು. ಇಂಥ ಯಾವುದೇ ಭೌತಸಂಬಂಧವನ್ನು — ಉದಾಹರ ಣೆಗೆ, ಸಪ್ತರ್ಷಿಮಂಡಲವನ್ನು ರೂಪಿಸುವ (ಚಿತ್ರ ೭ರಲ್ಲಿ ಮೇಲಿನಿಂದ ಕೆಳಕ್ಕೆ) ಮರೀಚಿ, ವಸಿಷ್ಠ, ಆಂಗೀರಸ್ಸ್, ಅತ್ರಿ, ಪುಲಸ್ತ್ಯ, ಪುಲಹ ಮತ್ತು ಕ್ರತು ಎಂಬ ಏಳು ನಕ್ಷತ್ರಗಳ ನಡುವೆ ಕಾಣಬಹುದೇ? ಅದನ್ನು ಅಳೆದು ಪರಿಮಾಣ ಗಳಲ್ಲಿ ನಿರೂಪಿಸಬಹುದೇ ? ಉತ್ತರ : ಖಂಡಿತವಾಗಿಯೂ ಕಾಣಲಾಗದು, ಪರಿಮಾಣಗಳಲ್ಲಿ ನಿರೂಪಿಸಲಾಗದು, ಇಲ್ಲವೂ ಇಲ್ಲ.

ವಸ್ತುಸ್ಥಿತಿ ಏನು ಗೊತ್ತೇ ? ಆ ನಕ್ಷತ್ರಗಳು ವಿಶ್ವದ ಅಸೀಮ ವ್ಯಾಪ್ತಿಯಲ್ಲಿ ಎಲ್ಲೆಲ್ಲಿಯೋ ಹರಡಿಹೋಗಿದ್ದು ತಮ್ಮ ತಮ್ಮ ಕಕ್ಷೆಗಳಲ್ಲಿ ಬೇರೆ ಬೇರೆ ವೇಗಗಳಿಂದ ಧಾವಿಸುತ್ತಿರುವ ವಿವಿಧ ಗಾತ್ರಗಳ ಹಾಗೂ ವಿಕಾಸ ಹಂತಗಳ ಸೂರ್ಯರು ! ಇಂಥ ಹಲವಾರು ನಕ್ಷತ್ರಗಳು ನಮ್ಮ ದೃಷ್ಟಿ ರೇಖೆಯ ಅಕ್ಕಪಕ್ಕಗಳಲ್ಲಿರುವಾಗ ನಮಗೆ ಒಂದು ಚಿತ್ರವಾಗಿ ಪ್ರಕಟವಾಗು ತ್ತವೆ, ಅಷ್ಟೆ. ಇದೊಂದು ಕಣ್ಕಟ್ಟು. ಆಕಾಶದ ಅಗಾಧ ದೂರಗಳನ್ನು ವಿಭೇದೀಕರಿಸಲಾಗದ ನಮ್ಮ ಅತಿ ಸೀಮಿತ ದೃಷ್ಟಿ ನಮ್ಮ ಮೇಲೆ ಬೀರುವ ಮಾಯೆ. ದೂರದ ಬೆಟ್ಟ ನುಣ್ಣಗೆ ಎನ್ನುವಾಗ ಇದೇ ಭಾವ ಅಧ್ಯಾಹಾರ. ಆದ್ದರಿಂದ ನಕ್ಷತ್ರ--ರಾಶಿ ಸಂಬಂಧ ಮಾಯೆ. ಅಂತೆಯೇ ರಾಶಿ--ರಾಶಿ ಸಂಬಂಧ ಕೂಡ.

ಈಗ ಗ್ರಹ-ಗ್ರಹ ಅಥವಾ ಗ್ರಹ-ರಾಶಿ (ಫಲಜ್ಯೋತಿಷ್ಯದ ನವ ಗ್ರಹಗಳು) ಸಂಬಂಧ ನೋಡೋಣ. ಉದಾಹರಣೆಗೆ, ಸೂರ್ಯ, ಚಂದ್ರ, ಕುಜ ಅಥವಾ ರಾಹು ಧನುರಾಶಿಯಲ್ಲಿವೆ ಎಂದರೇನರ್ಥ ? ಧನುರಾಶಿ ಹೆಸರಿನ ಚಿತ್ರದ ಅಥವಾ ರಂಗವಲ್ಲಿಯ ಒಳಗೆ ಆಯಾ ಗ್ರಹ ನೆಲಸಿದೆ ಎಂದು. ಭೂಮಿಯಿಂದ ಈ ಮೇಲಿನ ಯಾವುದೇ ಗ್ರಹದ ದೂರವನ್ನು (ವಾಸ್ತವವಾಗಿ ರಾಹುವಿಗೆ ಭೌತ ಅಸ್ತಿತ್ವವಿಲ್ಲ, ಅಂದ ಮೇಲೆ ದೂರವೆಲ್ಲಿಂದ ಬಂತು !) ಏಕಮಾನವೆಂದು ಆಯ್ದರೆ ಧನುರಾಶಿಯ ಯಾವುದೇ ಬಿಡಿ ನಕ್ಷತ್ರದ ದೂರ ಅನಂತವೆನ್ನಿಸುವಷ್ಟು ಅಗಾಧವಾಗಿದೆ. ಆದ್ದರಿಂದ ಗ್ರಹ-ರಾಶಿ ಭೌತ ಸಂಬಂಧ ಏನೂ ಇಲ್ಲ.

ನೀವು ಭೌತ-ಗಣಿತ ವಿಜ್ಞಾನಗಳಲ್ಲಿ ಪ್ರೀಯೂನಿವರ್ಸಿಟಿ ಶಿಕ್ಷಣವನ್ನಾದರೂ ಪಡೆದವರಾಗಿದ್ದರೆ ಮಘಾನಕ್ಷತ್ರ (ಇದು ಸಿಂಹರಾಶಿಯಲ್ಲಿದೆ) ಸೂರ್ಯನ ಮೇಲಾಗಲೀ ಭೂಮಿಯ ಮೇಲಾಗಲೀ ಬೀರುವ ಗುರುತ್ವ ಬಲದ ಪರಿಮಾಣವೆಷ್ಟೆಂದು ಗಣನೆ ಮಾಡಿ ನೋಡಬಹುದು. ಆಸ್ಟ್ರೇಲಿಯಾದಲ್ಲಿ ಸ್ವಚ್ಛಂದವಾಗಿ ನಡೆಯುತ್ತಿರುವ ಆನೆಯ ಮೇಲೆ ಬೆಂಗಳೂರಿನಲ್ಲಿ ಸ್ವೇಚ್ಛೆಯಂತೆ ಹಾರುತ್ತಿರುವ ಸೊಳ್ಳೆ ಬೀರುವ ಬಲದ ಪರಿಮಾಣಕ್ಕಿಂತಲೂ ಕಡಿಮೆ! ನಿಜ—ನೀವು ನಿಮ್ಮ ಕಿರುಬೆಟ್ಟನ್ನು ತುಸುವೇ ಹಂದಾಡಿಸಿದಾಗ ದೂರದ ಬ್ರಹ್ಮಾಂಡಗಳು ಗುರುತ್ವಾತ್ಮಕವಾಗಿ ಕಂಪಿಸುತ್ತವೆ: ತಾತ್ತ್ವಿಕವಾಗಿ ಇದು ಸರಿ. ಆದರೆ ಈ ಕಂಪನವನ್ನು ಅಳೆಯಬಲ್ಲೆವೇ? ಮಾನವಮಿತಿಗಳಲ್ಲಿ ಎಂದೂ ಸಾಧ್ಯವಾಗದು. ಹಾಗಿದೆ ಗ್ರಹ-ರಾಶಿ ಭೌತ ಸಂಬಂಧ.

## ಕೆಲವು ಭೌತ ಮಾಹಿತಿಗಳು

ನವಗ್ರಹಗಳನ್ನು ಕುರಿತಂತೆ ಕೆಲವು ಭೌತ ಮಾಹಿತಿಗಳು

| ಕಾಯದ ಹೆಸರು | ದ್ರವ್ಯರಾಶಿ ಭೂರಾಶಿ =೧ | ತ್ರಿಜ್ಯ ಭೂತ್ರಿಜ್ಯ =೧ | ಮೇಲ್ಮೈ ಗುರುತ್ವ ಭೂಗುರುತ್ವ =೧ | ಸೂರ್ಯನಿಂದದೂರ ಭೂಮಿ–ಸೂರ್ಯ ಅಂತರ =೧ |
|---|---|---|---|---|
| ಸೂರ್ಯ | ೩೩೩,೨೦೦ | ೧೦೮ | ೨೮.೫೭ | ೦ |
| ಚಂದ್ರ | ೦.೦೧೨೩ | ೦.೨೭ | ೦.೧೭ | ೧ |
| ಕುಜ | ೦.೧೦೮ | ೦.೫೩ | ೦.೩೮ | ೧.೫೨೪ |
| ಬುಧ | ೦.೦೫೬ | ೦.೩೮ | ೦.೩೯ | ೦.೩೮೭ |
| ಗುರು | ೩೧೮ | ೧೧.೧೯ | ೨.೬೪ | ೫.೨೦೩ |
| ಶುಕ್ರ | ೦.೮೨ | ೦.೯೫ | ೦.೯೧ | ೦.೭೨೩ |
| ಶನಿ | ೯೫.೨ | ೯.೪೩ | ೧.೧೩ | ೯.೬೩೯ |
| ರಾಹು | ೦ | ೦ | ೦ | — |
| ಕೇತು | ೦ | ೦ | ೦ | — |

ಟಿಪ್ಪಣಿ : ಭೂರಾಶಿ ೫,೯೭೭,000, 000, 000, 000, 000, 000 ಮೆಟ್ರಿಕ್ ಟನ್ನುಗಳು

ಭೂತ್ರಿಜ್ಯ (ಸಮಭಾಜಕೀಯ) ೧೨,೭೫೬ ಕಿಮೀ

ಭೂಗುರುತ್ವ (ಮೇಲ್ಮೈ) ಸೆಕೆಂಡ್-ಸೆಕೆಂಡಿಗೆ ೯೮೧ ಸೆಂಮೀ

ಸೂರ್ಯ-ಭೂಮಿ ಅಂತರ =೧ ಖಗೋಳಮಾನ= ೧೪೯,೬00, 000 ಕಿಮೀ

ಸೂರ್ಯ-ಚಂದ್ರ ಅಂತರ = ಸರಿಸುಮಾರು ೧ ಖಗೋಳಮಾನ

ಭೂಮಿ-ಚಂದ್ರ ಅಂತರ =೩೮೪, 000 ಕಿಮೀ

ರಾಹು ಮತ್ತು ಕೇತು : ಇವು ಭೌತ ಅಸ್ತಿತ್ವವಿರದ ಕಾಲ್ಪನಿಕ ಬಿಂದುಗಳು

ಭೂಮಿಯ ಮಾನದಂಡವಾಗಿ ಸೆಟೆದು ನಿಂತಿರುವ "ಹಿಮಾಲಯೋ ನಾಮ ನಗಾಧಿರಾಜ"ದ ಎತ್ತರ ಭೂಮಿಯ ಎತ್ತರದ (ಅಂದರೆ ವ್ಯಾಸದ 0.000 ೬೨೫ ಮಾತ್ರ ಇದೆ. ಸೂರ್ಯನಲ್ಲಿ ಸುಮಾರು ೧೩ ಲಕ್ಷ ಭೂಮಿಗಳನ್ನು ತುಂಬಬಹುದು.)

ಈ ಅಂಕೆ ಅಂಶಗಳಿಂದ ಅನುಗತವಾಗುವ ಮುಖ್ಯ ಸಂಗತಿಗಳು ಮೂರು :

* ವಿಶ್ವದಲ್ಲಿ ಮಾನವ ಅತಿ ಕ್ಷುದ್ರ ಸೂಕ್ಷ್ಮ ಜೀವಿ !

* ವಿಶ್ವ ಇರದಿದ್ದರೆ ಮಾನವನೂ ಇಲ್ಲ. ಮಾನವ ಇರದಿದ್ದರೆ ? ಖಂಡಿತವಾಗಿಯೂ ವಿಶ್ವ ಇದ್ದೇ ಇರುವುದು. ಆದ್ದರಿಂದ ವಿಶ್ವಕ್ಕೆ ಮಾನವ ಅನಿವಾರ್ಯವಲ್ಲ.

* ಮಾನವ ಮಿತಿಯಲ್ಲಿಯ 'ಅಗಾಧ,' 'ಮಹಾ,' 'ಬೃಹತ್,' 'ಅತಿಶಯ' ಮುಂತಾದ ವಿಶೇಷಣಗಳು ವಿಶ್ವದಲ್ಲಿ ಅರ್ಥಶೂನ್ಯವಾಗುತ್ತವೆ.

## ಫಲಜ್ಯೋತಿಷ್ಯದ ವಿಜ್ಞಾನತ್ವ

ಈಗ ಫಲಜ್ಯೋತಿಷ್ಯದ ವಿಜ್ಞಾನತ್ವ, ದೈವತ್ವ, ಭವಿಷ್ಯವಾಚನ ಸಾಮರ್ಥ್ಯ ಮುಂತಾದ ಸಾಧನೆ ಸಿದ್ಧಿಗಳನ್ನು ಕುರಿತ ಮೂಲಭೂತ ಪ್ರಶ್ನೆಗಳಿಗೆ (ಪುಟ ೬೮) ನೀವೇ ಸಮರ್ಪಕ ಉತ್ತರಗಳನ್ನು ಊಹಿಸಬಲ್ಲಿರಿ :

೧ "ಇಂಥ ಗ್ರಹ ಇಂಥ ಗೃಹದಲ್ಲಿದ್ದರೆ ಆ ವ್ಯಕ್ತಿಗೆ ಇಂಥ ಫಲ." ಇದು ನಿಜವೇ ?

ನಿಜವಲ್ಲ. ಹೀಗೆ ಹೇಳಲು ಯಾವ ವೈಜ್ಞಾನಿಕಾಧಾರವೂ ಇಲ್ಲ. ಅದನ್ನು ಪಡೆಯಲೂ ಸಾಧ್ಯವಿಲ್ಲ. ಏಕೆಂದರೆ ಗ್ರಹ-ಗೃಹ-ವ್ಯಕ್ತಿ ಸಂಬಂಧವೇ ಮಿಥ್ಯೆ, ಮಾಯೆ. ಇನ್ನು ವಿಜ್ಞಾನೇತರ ಅಥವಾ ವಿಜ್ಞಾನಾತೀತ ಚಿಂತನೆಗಳಿಂದಲೋ ಸ್ಫೂರ್ತಿಗಳಿಂದಲೋ ಗ್ರಂಥಗಳಿಂದಲೋ ಭವಿಷ್ಯವಾಚನ ಮಾಡುತ್ತಾರೆ, ಅದು ನಿಜವಾಗಿ ಪರಿಣಮಿಸಿದೆ ಎಂದು ವಾದಿಸುವುದಾದಲ್ಲಿ ಅಂಥವರನ್ನು ಮತ್ತು ಅಂಥವರ ಎಲ್ಲ ಆಧಾರಗಳನ್ನು ತೀವ್ರ ಮನೋವೈಜ್ಞಾನಿಕ ತಪಾಸಣೆಗೆ ಒಳಪಡಿಸುವುದೊಂದೇ ಮಾರ್ಗ. ಹುಂಚ್ಚರ ನೆಲೆವನೆ ಅಲ್ಲ ಈ ನೆಲ !

೨ "ಈ ವ್ಯಕ್ತಿಯ ಕಷ್ಟ ಕಾರ್ಪಣ್ಯಗಳು ಇಂಥ ಗೃಹದಲ್ಲಿ ಇಂಥ ಗ್ರಹ ಇರುವುದರಿಂದ ತಲೆದೋರಿವೆ." ಇದು ಸಾಧ್ಯವೇ ?

ಸಾಧ್ಯವಲ್ಲ. ಇಲ್ಲಿ ವ್ಯಕ್ತಿ-ಗೃಹ-ಗ್ರಹ ನಡುವೆ ಯಾವುದೇ ಭೌತ ಸಂಬಂಧ ಇಲ್ಲ. ವ್ಯಕ್ತಿಯ ಕಷ್ಟ ಕಾರ್ಪಣ್ಯಗಳ ಕಾರಣವನ್ನು ಆತನ ಪರಿಸರದಲ್ಲಿ ಅರಸಬೇಕೇ ಹೊರತು ಗ್ರಹ-ರಾಶಿಗಳ ಮಾಯಾಪ್ರಪಂಚದಲ್ಲಿ ಅಲ್ಲ. ಇಲ್ಲಿಯ ಕೋಟಲೆಗಳಿಗೆ ಎಲ್ಲಿಯೋ ಸಮಾಧಾನ ಹುಡುಕುವುದು ಕಗ್ಗತ್ತಲ ಗವಿಯಲ್ಲಿ, ಇಲ್ಲದ ಕಪ್ಪು ಪೆಟ್ಟಿಗೆಯೊಳಗೆ, ಅಡಗಿಸಿಡದ ಕಾಳಸರ್ಪವನ್ನು ಕುರುಡ ಶೋಧಿಸಿದಂತೆ !

೩ "ಕ್ರೂರ ಗ್ರಹಗಳು ಪ್ರತಿಕೂಲ ಗೃಹಗಳಲ್ಲಿ ನೆಲಸಿರುವಾಗ ವ್ಯಕ್ತಿಯ ಬದುಕು ಅಸನೀಯವಾಗುತ್ತದೆ. ಕಾರಣವೇನು ?"

ಫಲಜ್ಯೋತಿಷ್ಯದ 'ಗ್ರಹಗಳು' ಖಗೋಳ ವಿಜ್ಞಾನದ ಗ್ರಹಗಳಲ್ಲ ಎಂದು ಹಿಂದೆ ವಿವರಿಸಿದೆ. ಭೂಕೇಂದ್ರವಾದದ ಪ್ರಕಾರ ಫಲಜ್ಯೋತಿಷ್ಯದ 'ಗ್ರಹಗಳು' ಅಸ್ತಿತ್ವ ಪಡೆದಿವೆ. ವಾಸ್ತವವಾಗಿ ಈ ವಾದವೇ ತಪ್ಪು ಎಂದು ಈಗ ಗೊತ್ತಿದೆ. ಹೀಗೆ ಅಡಿಪಾಯವೇ ಇಲ್ಲದ ಸಿದ್ಧಾಂತದ ಮೇಲೆ ಕಟ್ಟಿದ ಸೌಧ ಈ ಫಲಜ್ಯೋತಿಷ್ಯ. ಅಂದ ಮೇಲೆ ಇದರ ಅಸ್ತಿತ್ವವೇನು ? ಮೈಸೂರಿನಿಂದ ಕಾಶಿಗೆ ಕಬ್ಬಿಣದ ದೋಣಿಯಲ್ಲಿ ನೆಲದ ಮೇಲೆ ತೇಲುತ್ತಾ ಹೋಗಿ ಅಲ್ಲಿಯ ಪವಿತ್ರ ಗಂಗಾಜಲವನ್ನು ಯಥೇಚ್ಛವಾಗಿ ಸೊಳ್ಳೆಪರದೆ ಚೀಲಗಳಲ್ಲಿ ತುಂಬಿಕೊಂಡು ಮರಳಿಬಂದಮೂಢನಂತೆ ! (ಕೈಲಾಸಂ ಜೋಕು)

ಕ್ರೌರ್ಯ, ಕರುಣೆ, ಪ್ರೀತಿ, ದ್ವೇಷ ಮುಂತಾದವು ಜೀವಿಜಗತ್ತಿನ — ವಿಶಿಷ್ಟವಾಗಿ ಮಾನವಪ್ರಪಂಚದ—ರಾಗಭಾವಗಳ ವಿಶಿಷ್ಟರೂಪಗಳು ಅಥವಾ ಛಾಯೆಗಳು. ಫಲಜ್ಯೋತಿಷ್ಯದ ಅಥವಾ ಖಗೋಳವಿಜ್ಞಾನದ ಎಲ್ಲ ಕಾಯಗಳೂ ನಿರ್ಜೀವಿಗಳು ; ಆದ್ದರಿಂದ ನಿರ್ಭಾವಿಗಳು. ಇವುಗಳಿಗೆ ಮಾನವ ಸಹಜ ಗುಣಗಳನ್ನು ಹೇರುವುದು ಅಬದ್ಧ. ಹಿಟ್ಲರ್ ನರಮೇಧದ ಅಧ್ವರ್ಯು ಎಂಬ ಕಾರಣದಿಂದ ಭೂಮಿ ಆತನನ್ನು ದ್ವೇಷಿಸದು, ಅಂತೆಯೇ ಗಾಂಧೀಜಿ ಶಾಂತಿ ದೂತ ಎಂಬ ಕಾರಣದಿಂದ ಭೂಮಿ ಅವರನ್ನು ಪ್ರೀತಿಸದು !

ಇನ್ನು ಮನೆಗಳು ಅಥವಾ ಗೃಹಗಳು ಇವು ರಾಶಿಗಳು. ಹಿಂದೆ ವಿವರಿಸಿರುವಂತೆ ಇವು ಮಿಥ್ಯಾಚಿತ್ರಗಳು. ಮಾನವಗುಣವಿರದ ಒಂದು ಕಾಯ ಯಾವುದೇ ಮಿಥ್ಯಾಚಿತ್ರದಲ್ಲಿ ನೆಲಸಿರುವಂತೆ ಕಂಡಾಗ ಬಿಡಿವ್ಯಕ್ತಿಯ ಬದುಕು ಅಸಹನೀಯವಾಗಬೇಕು ಅಥವಾ ಸಹನೀಯವಾಗಬೇಕು ಏಕೆ ? ಬದುಕು ಈ ನೆಲದ್ದು, ಈ ನೆಲದಲ್ಲಿಯ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದು, ಆತನ ಸಮಗ್ರ ಪರಿಸರದ ಜೊತೆಗಿನ ಸಂಬಂಧದಿಂದ ನಿರ್ಧರಿತವಾದದ್ದು. ಆದ್ದರಿಂದ ಬದುಕಿನ ಎಲ್ಲ ಸಮಸ್ಯೆಗಳಿಗೂ ಇಲ್ಲಿಯೇ ಪರಿಹಾರಗಳನ್ನು ಅನ್ವೇಷಿಸಬೇಕು.

೪ "ಫಲಜ್ಯೋತಿಷ್ಯವೆಂಬ ದೇವಾಂಶಸಂಭೂತ ಆಧ್ಯಾತ್ಮಿಕ ಜ್ಞಾನ ಪ್ರಕಾರವನ್ನು ವಿಜ್ಞಾನವೆಂಬ ಕೇವಲ ಭೌತ ಮತ್ತು ಲೌಕಿಕ ಪ್ರಕಾರದಿಂದ ಅಳೆಯಬಹುದೇ ? ವಿಜ್ಞಾನ ಎಷ್ಟಾದರೂ ಲೌಕಿಕ ವಿಚಾರಗಳಿಗೆ ಸಂಬಂಧಿಸಿದ್ದು—ಭೌತವಸ್ತುಗಳಿಂದ ಆಚೆಗೆ ಇದಕ್ಕೆ ಪ್ರವೇಶವಿಲ್ಲ. ಇಂದ್ರಿಯಗಮ್ಯ ಜ್ಞಾನಮಾತ್ರ. ಫಲಜ್ಯೋತಿಷ್ಯ ಹೀಗಲ್ಲ—ವಿಜ್ಞಾನಾತೀತ ವಿಶೇಷ ಜ್ಞಾನ ವಿದು."

"ದೇವಾಂಶಸಂಭೂತ ಆಧ್ಯಾತ್ಮಿಕ ಜ್ಞಾನಪ್ರಕಾರ." "ವಿಜ್ಞಾನಾತೀತ ವಿಶೇಷ ಜ್ಞಾನ" ಮೊದಲಾದ ಪದಪುಂಜಗಳು ಉತ್ಪಾದಿಸುವ ನಿಗೂಢ ಅಸ್ಪಷ್ಟತೆಗೆ ಅಥವಾ ದೈವಿಕ ಉನ್ಮಾದಕ್ಕೆ ಯಾರೂ ಬೆರಗಾಗಿ ಮೋಸಹೋಗಬೇಕಾಗಿಲ್ಲ. ವಿಶ್ವಾದ್ಯಂತ ವರ್ತಿಸುತ್ತಿರುವುದು ಒಂದೇ : ಭೌತಘಟಕಗಳ ಸಂಕೀರ್ಣ ಸಂಯುಕ್ತ ಫಲಗಳು. ಇವನ್ನು ಯಾರು ಬೇಕಾದರೂ ಪರೀಕ್ಷಿಸಿ ಮತ್ತು ಪ್ರಯೋಗಿಸಿ ತಿಳಿಯಬಹುದು. ಇಲ್ಲಿ "ದೇವಾಂಶ ಸಂಭೂತ"ಗಳಿಗೆ ಅಸ್ತಿತ್ವವೇ ಇಲ್ಲ.

ಇನ್ನು "ವಿಜ್ಞಾನಾತೀತ ವಿಶೇಷ ಜ್ಞಾನ." ನಮ್ಮ ಧರ್ಮದ ಮೂಲ ಪುರುಷ ಅಥವಾ ಇತಿಹಾಸದ ಪ್ರವರ್ತಕ ಎಂಥ ದೇವಮಾನವ, ಅವತಾರ, ಮಾನವರೂಪದ ಭಗವಂತ, ಮಹಾಮಹಿಮ ಎಂದು ಮುಂತಾಗಿ ನಾವು ಗರ್ಜನೆಗೈದರೂ ಆತನ ಪವಾಡಗಳು, ಲೀಲೆಗಳು, ಸಾಹಸಗಳು, ಪ್ರತಾಪ ಗಳು ಮುಂತಾದವು ವಿಜ್ಞಾನಕ್ಕೆ ಎಂಥ ಸವಾಲುಗಳು, ಆದ್ದರಿಂದ ವಿಜ್ಞಾನಾ ತೀತ ಬಲಗಳಿವೆ ಎಂದು ಮುಂತಾಗಿ ನಾವು ಘೋಷಿಸಿದರೂ ಇಂಥ ಯಾವ ಅಟ್ಟಹಾಸವೂ ಎಂದೂ ಭೌತವಾಸ್ತವತೆ ಆಗದು! ಯಾವುದೇ ಸಂಗತಿ, ಹೇಳಿಕೆ ಅಥವಾ ಸೂಕ್ತಿಯನ್ನು ಎಷ್ಟು ಜನ ಎಷ್ಟು ಕಾಲ ಎಷ್ಟು ನಿಷ್ಠೆ ಯಿಂದ ನಂಬಿದ್ದಾರೆ ಎನ್ನುವ ಬಹುಮತದ ಆಧಾರದಿಂದ ಅದು ಘನ ಜೀವನ ಸತ್ಯವಾಗಬೇಕಾಗಿಲ್ಲ, ಆಗುವುದೂ ಇಲ್ಲ.

ವಾಸ್ತವತೆ ಇದು: ಎಲ್ಲರೂ ಮನುಷ್ಯರೇ. ಈ ನೆಲದ ಶಿಶುಗಳೇ, ಆದ್ದರಿಂದ ಸಮಾನ ಗುಣಧರ್ಮಿಗಳೇ. ಆದರೆ ಪ್ರತಿಭೆ, ಸಾಮರ್ಥ್ಯ, ಗುಣ, ಲಕ್ಷಣ ಮುಂತಾದವುಗಳಲ್ಲಿ ವಿಭಿನ್ನರು. ಸೃಷ್ಟಿಯಲ್ಲಿ ಅಂತರ್ಗತವಾಗಿರುವ ಅನಂತ ವೈವಿಧ್ಯವೇ ಅದರ ಸೌಂದರ್ಯದ ರಹಸ್ಯ. ಈಗ ಮನುಷ್ಯರು ಬಾಹ್ಯ ಜಗತ್ತಿನ ಬಗ್ಗೆ ತಿಳಿವಳಿಕೆ ಗಳಿಸುವುದು ಅವರ ಪಂಚೇಂದ್ರಿಯಗಳ ಮೂಲಕ. ಮುಂದೆ ಅವರವರ ಪ್ರತಿಭಾನುಸಾರ ವ್ಯಾಖ್ಯಾನಗಳನ್ನು ಮಂಡಿಸುತ್ತಾರೆ. ಸಾರಾಂಶವಿಷ್ಟು: ಭೌತಜಗತ್ತೇ ಎಲ್ಲ ತಿಳಿವಳಿಕೆಗೂ ಆಕರ. ಈ ಭೌತಜಗತ್ತಿನ ಜ್ಞೇಯಸಿಷ್ಠ ಅಧ್ಯಯನವೇ ವಿಜ್ಞಾನ. ಅಂದ ಮೇಲೆ "ವಿಜ್ಞಾನಾತೀತ," ಅಥವಾ "ವಿಜ್ಞಾನಬಾಹಿರ" ಎನ್ನುವ ಕೃತಕ ವಿಶೇಷಣಗಳಿಗೆ ಅರ್ಥವೇ ಇಲ್ಲ. ಪೂರ್ಣದೊಳಗಿನ ಕ್ರಮ ಪೂರ್ಣಾತೀತ ವನ್ನು ಕಿನವರಿಸಿಬಂತಿದ ಈ "ವಿಜ್ಞಾನಾತೀತ" ಗೊಂದಲ!

೫ "ನನ್ನ ಜಾತಕದ ಪ್ರಕಾರ ಭವಿಷ್ಯ ನುಡಿದುದು ನೂರಕ್ಕೆ ನೂರು ಸತ್ಯವಾಗಿದೆ. ಫಲಜ್ಯೋತಿಷ್ಯ ಸುಳ್ಳಾಗಿದ್ದರೆ ಇದು ಹೇಗೆ ಸಾಧ್ಯವಾಯಿತು?"

ಇಂಥ ಪ್ರಾಮಾಣಿಕ ಸಂದೇಹಗಳನ್ನು ಮೂರು ದೃಷ್ಟಿಗಳಿಂದ ಪರಿ ಶೀಲಿಸಬೇಕು.

* ಫಲಜ್ಯೋತಿಷಿ ತನ್ನ ನಯವಿನಯದಿಂದ, ಮಾತಿನ ಮೋಡಿಯಿಂದ ಮತ್ತು ಮಂತ್ರತಂತ್ರಗಳ ಪ್ರದರ್ಶನದಿಂದ ವ್ಯಕ್ತಿಯ ಮೇಲೆ ಮೋಡಿ ಬೀರು ತ್ತಾನೆ. ಅಂದರೆ ಈಗ ವ್ಯಕ್ತಿ ಪೂರ್ತಿ ಫಲಜ್ಯೋತಿಯ 'ಮಾಂತ್ರಿಕ ಸಾಮರ್ಥ್ಯ' ಕ್ಕೂ 'ದೈವಿಕ ಪ್ರಭಾವ'ಕ್ಕೂ ವಶನಾಗಿರುತ್ತಾನೆ, ಹೀಗೆ ಗಂಟೆಗಟ್ಟಲೆ—

ಅಥವಾ ಹಲವಾರು ಬೈಠಕ್ಕುಗಳಲ್ಲಿ ಕೂಡ—ನಡೆಯುವ 'ಹೃದಯ ಸಂವಾದ'ದ ವೇಳೆ ವ್ಯಕ್ತಿ ತನ್ನ ಆತ್ಮಚರಿತ್ರೆಯನ್ನು ಪೂರ್ತಿ ಫಲಜ್ಯೋತಿಷಿಗೆ ಒಪ್ಪಿಸಿರುತ್ತಾನೆ. ಅಂದರೆ ಬುದ್ಧಿಭಾವಗಳಲ್ಲಿ ಆತನ ದಾಸಾನುದಾಸನಾಗಿರುತ್ತಾನೆ. ಉಳಿದದ್ದೇನು ? ಶಾಸ್ತ್ರ ಮಂತ್ರ ತರ್ಕ ಸಿದ್ಧಾಂತ ಮುಂತಾದವು, ಫಲ ಜ್ಯೋತಿಷಿಯ ದೈವಿಕ ಪ್ರತಿಭೆ ಅಪಾರ ಅನುಭವ ಮಾನವೀಯತೆ ಮುಂತಾದವು, ಮತ್ತು ವ್ಯಕ್ತಿಯ ಆತ್ಮನಿವೇದನೆ—ಈ ಮೂರನ್ನು ಯುಕ್ತವಾಗಿ ಬೆಸೆದು ಆಕರ್ಷಕ ನುಡಿಗಳಲ್ಲಿ ವ್ಯಕ್ತಿಯ ತ್ರಿಕಾಲ ಚರಿತ್ರೆಯ ನಿರೂಪಣೆ! "ಆಹಾ ! ಎಷ್ಟು ಸೊಗಸಾಗಿ ಈತ ನನ್ನ ಗತಜೀವನ ವೃತ್ತಾಂತವನ್ನು ಸ್ವತಃ ತಾನೇ ಅನುಭವಿಸಿದಷ್ಟು ಹೃದಯಂಗಮವಾಗಿ ಹೇಳಿದ್ದಾನೆ !" ಇಂಥ ಶರಣಾಗತಿ ಭಾವಕ್ಕೆ ಎಲ್ಲವೂ ಸರಿ, ಸುಸಂಬದ್ಧ, ಸುಗಮ.

ಐತಿಹಾಸಿಕ ನಿದರ್ಶನವೊಂದು ನೋಡಿ. ಪ್ರಾಚೀನ ಫಲಜ್ಯೋತಿಷಿಗಳು ಧೂಮಕೇತುದರ್ಶನಕ್ಕೂ ಪರಿಷ್ಕರ ಮರಣಕ್ಕೂ 'ವೈಜ್ಞಾನಿಕ ಸಂಬಂಧ' ಕಲ್ಪಿಸಿಯೇಬಿಟ್ಟರು. ಆಧಾರ ? ಸಂಖ್ಯಾಕಲನಾತ್ಮಕ ಪುರಾವೆ : ಪ್ರತಿಸಲವೂ ಧೂಮಕೇತು ಅಲ್ಲಿ ಪ್ರಕಟವಾದಾಗ ಇಲ್ಲಿ ಧುರೀಣರ ಮರಣ ಸಂಭವಿಸಿದೆ. ಆದ್ದರಿಂದ ತೀರ್ಮಾನ : "ಧೂಮಕೇತು ಮೈದೋರಿದಾಗ ರಾಜ ಮಡಿಯಬೇಕು, ಮತ್ತು ವಿಲೋಮವಾಗಿ, ರಾಜ ಮಡಿದಾಗ ಧೂಮಕೇತು ಮೈದೋರಬೇಕು." ಪವಿತ್ರ ರೋಮನ್ ಚಕ್ರಾಧಿಪತ್ಯದ ನಿರ್ವಿವಾದ ಪ್ರಭುವಾಗಿದ್ದ ಮಹಾಪ್ರತಾಪಶಾಲಿ ಶಾರ್ಲ್‌ಮೇನ್ (ಕ್ರಿ.ಶ ೭೪೨–೮೧೪) ಕೂಡ ಒಂದು ದಿನ ಇತರ ಮನುಷ್ಯರಂತೆ ಗತಿಸಿದ. ಆದರೆ ಈ ಮಹಾ ಘಟನೆಯನ್ನು ಪ್ರತೀಕಿಸುವ ಯಾವ ಧೂಮಕೇತುವೂ ಅಂತರಿಕ್ಷದಲ್ಲಿ ಪ್ರತ್ಯಕ್ಷವಾಗಲಿಲ್ಲ. ದೇವರು ಮನೆಗೆಲಸ ಮಾಡುವುದರಲ್ಲಿ ಕುಂಟಿದನೇ ? ದಿವಾರಾತ್ರಿ ಎಚ್ಚರವಾಗಿರುತ್ತಿದ್ದ ಫಲಜ್ಯೋತಿಷಿಗಳೂ ಇತಿಹಾಸಕಾರರೂ ಗುಪ್ತ ಸಮಾಲೋಚನೆಗೈದು ಇತಿಹಾಸದ ಪುಟಗಳಲ್ಲಿ ಇಸವಿ ೮೧೪ಕ್ಕೆ ಹೊಂದುವಂತೆ ಧೂಮಕೇತು ದರ್ಶನವನ್ನು ದಾಖಲಿಸಿದರು. ಗ್ರಹಗತಿಯಲ್ಲಿ ಲಯ ತಪ್ಪಿದರೇನಂತೆ—ತಿದ್ದಿದರಾಯಿತು ಜಾತಕ!

* ಫಲಜ್ಯೋತಿಷಿಯ ಜೊತೆ ಸಮಾಲೋಚನೆ ಮಾಡಲು ಹೋಗುವ ವ್ಯಕ್ತಿಯ ಮನೋಧರ್ಮ ಹೇಗಿರುತ್ತದೆ ? ಆತ ಹೇಳಿದ್ದನ್ನೆಲ್ಲ ನಂಬುವ 'ದೈವಿಕ ಉನ್ಮಾದ' ಸ್ಥಿತಿಯಲ್ಲಿರುತ್ತದೆ. ತರ್ಕರಹಿತ ನಂಬಿಕೆಯೊಂದೇ ಅಲ್ಲಿ

ಚಲಾವಣೆ. ಅಂದಮೇಲೆ ಫಲಜ್ಯೋತಿಷಿ ಏನು ಹೇಳಿದರೂ ಹೇಗೆ ಹೇಳಿದರೂ ಅದಕ್ಕೆ ಈತ ತನಗೆ ಬೇಕಾಗುವ ವ್ಯಾಖ್ಯಾನವನ್ನೇ ಮಾಡಿ ಆತ ಹೇಳಿದ್ದೆಲ್ಲವೂ ಸತ್ಯವೆಂದೇ ತಿಳಿಯುತ್ತಾನೆ. ಮನಸ್ಸು ಬಯಸಿದುದನ್ನು ಇಂದ್ರಿಯಗಳು ಕಾಣುತ್ತವೆ, ಅರುಹುತ್ತವೆ ಅಥವಾ ಪ್ರಕಟಿಸುತ್ತವೆ. ಉದಾಹರಣೆಗೆ ಸರ್ಪ ರಜ್ಜುನ್ಯಾಯ.

ದೈವಿಕ, ಪಾರಲೌಕಿಕ, ಅತೀಂದ್ರಿಯ, ವಿಜ್ಞಾನಾತೀತ ಮುಂತಾದ ವಿದ್ಯಮಾನಗಳು ವರದಿಯಾದಾಗ ಇವುಗಳ ತಥ್ಯವನ್ನು ವೈಜ್ಞಾನಿಕವಾಗಿ ತಪಾಸಿಸಿ ನಿಜಸಂಗತಿಯನ್ನು ಪ್ರಕಟಿಸುವ ಸಂಸ್ಥೆ ಅಮೇರಿಕದಲ್ಲಿದೆ. Committee for Scientific Investigation of Claims of the Paranormal. ಇದರ ಅಧ್ಯಕ್ಷ ಪಾಲ್ ಕುರ್ಟ್ಸ್ಜ್, ಮತ್ತು ಸದಸ್ಯ ಹಾಗೂ Astronomical Society of the Pacific ಇದರ ಕಾರ್ಯನಿರ್ವಾಹಕಾಧಿಕಾರಿ ಆ್ಯಂಡ್ರೂ ಫ್ರಾಕ್ನಾಯ್ Hogwash ! ಎಂಬ ಲೇಖನ ಪ್ರಕಟಿಸಿದ್ದಾರೆ ('2001' August 1988). ಇದರ ಉದ್ಧೃತಾಂಶ :

* ವ್ಯಕ್ತಿತ್ವದ ಲಕ್ಷಣಗಳ ವಿಶ್ಲೇಷಣೆಗೆ ಜಾತಕಗಳನ್ನು ವಿಶ್ವಾಸಾರ್ಹ ದಾಖಲೆಗಳೆಂದು ಪರಿಗಣಿಸಬಹುದೇ ? ಆಸ್ಟ್ರೇಲಿಯಾದ ಸಂಶೋಧಕ ಜಿಯೋಫ್ರೆಡಿನ್ ಎಂಬವರು ಈ ಕುರಿತು ಬ್ರಿಟನ್ ಮತ್ತು ಅಮೇರಿಕ ದೇಶಗಳ ೪೫ ಮಂದಿ ಜ್ಯೋತಿಷಿಗಳನ್ನು ಪರೀಕ್ಷಿಸಿದರು. ಇವರಿಗೆ ಕೊಡಲಾದ ಪರೀಕ್ಷೆ ತೀರ ಸರಳ : ಈ ಜ್ಯೋತಿಷಿಗಳು ೨೪೧ ವ್ಯಕ್ತಿಗಳ ಜಾತಕಗಳನ್ನು ಅಭ್ಯಸಿಸಿ ಇವರು ಅಂತರ್ಮುಖಿಗಳೇ ಬಹಿರ್ಮುಖಿಗಳೇ ಎಂದು ಮಾತ್ರ ಕಣಿನುಡಿಯಬೇಕು. ಇವೇ ೨೪೦ ಮಂದಿಯನ್ನು ಮನೋವೈಜ್ಞಾನಿಕ ಪರೀಕ್ಷೆಗಳಿಗೆ ಒಳಪಡಿಸಿ ಇವರ ಸ್ವಭಾವಗಳನ್ನು ನಿರ್ಧರಿಸಲಾಗಿತ್ತು. ಎರಡನ್ನೂ ಹೋಲಿಸಿದಾಗ ತಿಳಿದದ್ದೇನು ? ಜ್ಯೋತಿಷಿಗಳ ಭವಿಷ್ಯವಾಣಿ ಪೂರ್ತಿ ಹುಸಿಯಾಗಿತ್ತು.

ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಶಾನ್‌ಕಾರ್ಲ್‌ಸನ್ ಎಂಬವರು ಯೂರೋಪ್ ಮತ್ತು ಅಮೇರಿಕ ದೇಶಗಳ ೩೦ ಮಂದಿ ಮುಂಚೂಣಿ ಜ್ಯೋತಿಷಿಗಳನ್ನು ಪರೀಕ್ಷಿಸಿ ಪಡೆದ ಫಲಿತಾಂಶವನ್ನು *Nature* ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಪರೀಕ್ಷೆ ಇದು : ೧೧೬ ಮಂದಿಯ ವ್ಯಕ್ತಿತ್ವಗಳನ್ನು ವಿವರಿಸುವ ನುಡಿಚಿತ್ರಗಳನ್ನು ಆಯಾ ವ್ಯಕ್ತಿಯ ಜಾತಕದ ಜೊತೆ ಹೊಂದಿಸಬೇಕು. ಇದನ್ನು ತಾವು ಮಾಡಬಲ್ಲೆವೆಂಬ ಭರವಸೆ ಆ ಜ್ಯೋತಿಷಿಗಳಿಗಿತ್ತು.

ಪ್ರತಿಯೊಬ್ಬ ವ್ಯಕ್ತಿಯ ನಿಖರ ನುಡಿಚಿತ್ರ, ಈತನ ಜಾತಕ ಹಾಗೂ ಯಾದೃಚ್ಛಿಕವಾಗಿ ಆಯ್ದ ಇತರ ಎರಡು ಕಾಲ್ಪನಿಕ ನುಡಿಚಿತ್ರಗಳು ಇಷ್ಟನ್ನು ಪ್ರತಿಯೊಬ್ಬ ಜ್ಯೋತಿಷಿಗೂ ಒದಗಿಸಲಾಯಿತು. ಅಂದರೆ ಜ್ಯೋತಿಷಿಗೆ ಒದಗಿಸಿದ ದಾಖಲೆಗಳಿವು : ೧೧೬ ಜಾತಕಗಳು, ೧೧೬ ನಿಖರ ನುಡಿಚಿತ್ರಗಳು ಮತ್ತು ೨೩೨ ಕಾಲ್ಪನಿಕ ನುಡಿಚಿತ್ರಗಳು. ಈ ಗೊಂದಲದಿಂದ ಆತ ಜಾತಕ-ನಿಖರನುಡಿಚಿತ್ರ ಏಕೈಕ ಹೊಂದಾಣಿಕೆಯನ್ನು ಹೆಕ್ಕಬೇಕಾಗಿತ್ತು.

ದೊರೆತ ಅಂತಿಮ ಫಲಿತಾಂಶವೇನು ? ಜಾತಕ–ನಿಖರ ನುಡಿಚಿತ್ರ ಹೊಂದಾಣಿಕೆ ಕಾಕತಾಳೀಯವಾಗಿ ಎಷ್ಟು ಸಲ ಸರಿಹೊಂದಬಹುದಿತ್ತೋ—ಇದು ಊಹೆಯಿಂದಲೂ ಸಾಧ್ಯವಿದೆ—ಅಷ್ಟು ಸಲ ಸರಿಹೊಂದಿತ್ತು. ೧೯೮೦ರಿಂದೀಚೆಗೆ ಇಂಥ ಐದು ಪರೀಕ್ಷೆಗಳನ್ನಾದರೂ ಮಾಡಲಾಗಿದೆ. ಪ್ರತಿ ಸಲವೂ ಫಲಿತಾಂಶ ನಿಷೇಧಾತ್ಮಕವಾಗಿಯೇ ಕಂಡುಬಂದಿದೆ.

ಫಲಜ್ಯೋತಿಷ್ಯವನ್ನು ವೈಜ್ಞಾನಿಕ ತಪಾಸಣೆಗಳಿಗೆ ಒಳಪಡಿಸಿದಾಗ ಪ್ರತಿಸಲವೂ ಅದು ಸುಳ್ಳೆಂದು ಸಾಬೀತಾದರೂ ಇಷ್ಟೊಂದು ಮಂದಿ ತಮ್ಮನ್ನು ಕುರಿತಂತೆ ಅದು ಸಾಧುವಾಗಿದೆಯೆಂದು ಭಾವಿಸುವುದೇಕೆ ? ಈ ಪ್ರಶ್ನೆಯ ಬಗ್ಗೆ ಜೆಯೋ ಫ್ರೆಡೀನ್ ತಮ್ಮ ಅತಿ ನಿಷ್ಕೃಷ್ಟ ಅಧ್ಯಯನ ಫಲವನ್ನು ***Skeptical Inquirer*** ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ : ಜ್ಯೋತಿಷಿ ಏನೇ ಹೇಳಲಿ ಆತನ ಕಣಿನುಡಿ ಮಾತ್ರ ಯಶಸ್ವಿಯಾಗಿದೆಯೆಂದೇ (ಅಂದರೆ ನಿಜವೆಂದೇ) ಹೆಚ್ಚಿನವರು ಅಂಗೀಕರಿಸುತ್ತಾರೆ !

೨೨ ಮಂದಿ ಜಾತಕರಿಗೆ, ಅವರು ಏನಾಗಿರುವರೆಂದು ಭಾವಿಸಲಾಗಿತ್ತೋ, ಅದರ ವಿರುದ್ಧ ಜಾತಕ ಫಲಗಳನ್ನು ಡೀನ್ ಒದಗಿಸಿದರು. ಆಗಲೂ ಅವರು ಈ ಫಲಗಳು ತಮಗೆ ಅನ್ವಯವಾಗುವುವೆಂದು ಒಪ್ಪಿಕೊಂಡರು. ಇದೊಂದು ಮನೋವೈಜ್ಞಾನಿಕ ವಿದ್ಯಮಾನ. ಹಸ್ತಸಾಮುದ್ರಿಕಾ ಶಾಸ್ತ್ರ, ಸಂಖ್ಯಾಫಲಶಾಸ್ತ್ರ, ಟ್ಯಾರಟ್ ಕಾರ್ಡುಗಳು ಅಥವಾ ಐಚಿಂಗ್ ಉಪಯೋಗಿಸಿ ಅಥವಾ ಇಂಥವೇ ವಾಮವಿಧಾನಗಳನ್ನು ಅವಲಂಬಿಸಿ ಭವಿಷ್ಯ ನುಡಿಯುವುದರಲ್ಲಿಯೂ ಇದೇ ಮನೋಭಾವ ಪ್ರಕಟವಾಗುತ್ತದೆ.

ಇದರ ಒಂದು ಕಾರಣವೇನೆಂದರೆ ಇಲ್ಲಿ ಬಳಸಲಾಗುವ ವಿಶೇಷಣಗಳು ಅತ್ಯಂತ ಸಾರ್ವತ್ರಿಕವಾದವು. ಆದ್ದರಿಂದ ಇವು ಪ್ರತಿಯೊಬ್ಬನಿಗೂ ಸಾಕಷ್ಟು ಪ್ರಮಾಣದಲ್ಲಿ ಹೊಂದಿಯೇ ಹೊಂದುತ್ತವೆ : 'ಖಂಡಿತವಾದಿ,' 'ಸಂಗ್ರಹ

ಶೀಲ,' 'ಪರಿವರ್ತನಶೀಲ,' 'ಸಂವೇದನಶೀಲ,' 'ಸೃಜನಶೀಲ,' 'ವಿಮರ್ಶಾತ್ಮಕ,' 'ಸುಸಂಗತ,' 'ರಹಸ್ಯಶೀಲ,' 'ಸಾಹಸಪ್ರವೃತ್ತಿಯ,' 'ಜಾಗರೂಕ ಸ್ವಭಾವದವ,' 'ನಿರ್ಲಿಪ್ತ,' 'ಅಂತರ್ಬೋಧಾತ್ಮಕ,' ಇತ್ಯಾದಿ. ಈ ಸಾರ್ವತ್ರಿಕ ಗುಣವಾಚಕಗಳು ಹೆಚ್ಚಿನ ಮಂದಿಗೆ ಸ್ವಲ್ಪ ಮಟ್ಟಿಗಾದರೂ ಅನ್ವಯವಾಗಿಯೇ ಆಗುತ್ತವೆ. ಇನ್ನು ಜನರ ಮನೋಭಾವ ಹೇಗಿರುತ್ತದೆ ? ಪ್ರತಿಯೊಬ್ಬನೂ ಈ ಸಕಲಗುಣಸಂಪನ್ನ ತಾನು ಮಾತ್ರ ಎಂದು ನಂಬಿರುತ್ತಾನೆ ! ಎಂದೇ ಇವುಗಳಿಗೆ ಒಂದು ತೆರನಾದ ಸಾರ್ವತ್ರಿಕ ಸಿಂಧುತ್ವ ಒದಗಿದೆ. *

ಕೃತಿ ಬಿಂಬ. ನುಡಿ ಪ್ರತಿಬಿಂಬ. ಈ ಬಿಂಬ-ಪ್ರತಿಬಿಂಬ ಸಂಬಂಧ ಒಡೆದುಹೋಗಿ ಪ್ರತಿಬಿಂಬಕ್ಕೆ ಅತಿಶಯ ಮಹತ್ತ್ವ ಪ್ರಾಪ್ತವಾದಾಗ ಏನಾಗುತ್ತದೆ ? ಫಲಜ್ಯೋತಿಷ್ಯ ನಡೆಸುವ ಸಾಮೂಹಿಕ ವಂಚನೆ ಜೀವನವಿಧಾನವೇ ಆಗುತ್ತದೆ.

ಹಲವಾರು ವಿಷಯಗಳನ್ನು ಫಲಜ್ಯೋತಿಷಿ ಮುನ್ನುಡಿದಿರುತ್ತಾನೆ : ಇದೊಂದು *package deal* ! ಮಾರುಕಟ್ಟೆಯ ಒಟ್ಟು ಸಟ್ಟಾ ವ್ಯವಹಾರ. ಈ ಪೈಕಿ ಕೇವಲ ಕೆಲವು ಕಾಕತಾಲೀಯತೆಯ ಕಾರಣವಾಗಿ ನಿಜವಾಗುವ ಸಾಧ್ಯತೆಯಿದೆ. ಜಾತಕನ ವಿಧೇಯ ಮನಸ್ಸು ಈ ನಿಜ ಸಂಗತಿಗಳನ್ನು ಗಟ್ಟಿ ಹಿಡಿದುಕೊಂಡು ಉಳಿದವನ್ನು ಮರೆತುಬಿಡುತ್ತದೆ—ಯಶಸ್ಸು ದಾಖಲಾಗುತ್ತದೆ, ಅಪಯಶಸ್ಸು ವಿನಾಯತಿ ಪಡೆಯುತ್ತದೆ. ಮತ್ತೂ ವಾದಕ್ಕೆ ಇಳಿದರೆ ಪೂರ್ವಜನ್ಮ ಫಲ, ಕರ್ಮಸಿದ್ಧಾಂತ, ಜನನಕ್ಷಣ ನಿಖರವಾಗಿ ದಾಖಲಾಗದಿದ್ದುದು, ಇತರ ಕಾರಕಗಳ ಸಂಯುಕ್ತ ಫಲ ಮುಂತಾದ ಅಮೂರ್ತ ಅಸ್ಪಷ್ಟತೆಗಳಲ್ಲಿ ಫಲಜ್ಯೋತಿಷಿಯೂ ಜಾತಕನೂ ಆಸರೆ ಪಡೆಯುವುದು ಸುಲಭ. "ಕಡೆಗೆ ಕರುಣಾಳು ರಾಘವನಲಿ ತಪ್ಪಿಲ್ಲ !" ಫಲಜ್ಯೋತಿಷ್ಯವೆಂದೂ ಹುಸಿಯಾಗದು !

ಆಧುನಿಕ ಪ್ರಪಂಚದ ೧೮೭ ಮಂದಿ ಪ್ರಸಿದ್ಧ ವಿಜ್ಞಾನಿಗಳು—ಇವರಲ್ಲಿ ಭಾರತಸಂಜಾತ ಖಭೌತವಿಜ್ಞಾನಿ ಎಸ್. ಚಂದ್ರಶೇಖರ್ (೧೯೧೦) ಸೇರಿದಂತೆ ೧೯ ಮಂದಿ ನೊಬೆಲ್ ಪಾರಿತೋಷಿಕವಿಜೇತರೂ ಇದ್ದಾರೆ—ಅಮೇರಿಕದ *The Humanist* ಪತ್ರಿಕೆಯ ೧೯೭೫ ಸೆಪ್ಟೆಂಬರ್-ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಿಸಿರುವ ಟಿಪ್ಪಣಿಯ ಅನುವಾದ :

"ಫಲಜ್ಯೋತಿಷ್ಯಕ್ಕೆ ಇಂದು ಪ್ರಪಂಚದ ಹೆಚ್ಚಿನ ಕಡೆಗಳಲ್ಲಿ ಅತಿಶಯ

ಪುರಸ್ಕಾರ ಲಭಿಸುತ್ತಿರುವುದು ಕಂಡು ವಿವಿಧ ಕ್ಷೇತ್ರಗಳಲ್ಲಿರುವ ವಿಜ್ಞಾನಿಗಳು ಆತಂಕಗೊಂಡಿದ್ದಾರೆ. ಫಲಜ್ಯೋತಿಷಿಗಳು ಖಾಸಗಿಯಾಗಿ ಮತ್ತು ಸಾರ್ವಜನಿಕವಾಗಿ ನುಡಿಯುವ ಭವಿಷ್ಯವನ್ನೂ ನೀಡುವ ಸಲಹೆಯನ್ನೂ ಜನ ಪ್ರಶ್ನೆಗೆ ಒಳಪಡಿಸದೆ ಅಂಗೀಕರಿಸುವುದರ ವಿರುದ್ಧ ನಾವು—ಈ ಕೆಳಗೆ ರುಜು ಹಾಕಿರುವ ಖಗೋಳವಿಜ್ಞಾನಿಗಳು, ಖಭೌತವಿಜ್ಞಾನಿಗಳು ಹಾಗೂ ಇತರ ಕ್ಷೇತ್ರಗಳಲ್ಲಿಯ ವಿಜ್ಞಾನಿಗಳು—ಸಾರ್ವಜನಿಕರಿಗೆ ಎಚ್ಚರಿಕೆಯ ನುಡಿ ಹೇಳಬಯಸುತ್ತೇವೆ. ಫಲಜ್ಯೋತಿಷ್ಯವನ್ನು ನಂಬಬೇಕೆಂದಿರುವವರು ಅದರ ಸಿದ್ಧಾಂತಗಳಿಗೆ ಯಾವುದೇ ವೈಜ್ಞಾನಿಕ ಅಡಿಪಾಯ ಇಲ್ಲ ಎಂಬುದನ್ನು ಮನಗಾಣಬೇಕು.

"ಪ್ರಾಚೀನ ಕಾಲದಲ್ಲಿ ಜನ ಜಗತ್ತಿನ ಬಗ್ಗೆ ತಳೆದಿದ್ದ ನಿಗೂಢ ಐಂದ್ರಜಾಲಿಕ ಕಲ್ಪನೆಯ ಅವಿಭಾಜ್ಯ ಘಟಕವಾಗಿ ಫಲಜ್ಯೋತಿಷ್ಯವೂ ಇತ್ತು. ಎಂದೇ ಅಂದಿನವರು ಫಲಜ್ಯೋತಿಷಿಗಳು ನುಡಿದ ಭವಿಷ್ಯವನ್ನೂ ನೀಡಿದ ಸಲಹೆಯನ್ನೂ ನಂಬಿದರು. ಆಕಾಶಕಾಯಗಳು ದೇವತೆಗಳ ನೆಲೆವನೆಗಳು ಅಥವಾ ಅವು ದೇವತೆಗಳಿಂದ ಪ್ರಸರಿಸಲ್ಪಡುವ ಶಕುನಗಳು, ಮತ್ತು ಈ ಕಾರಣದಿಂದ, ಅವು ಭೂಮಿಯಲ್ಲಿಯ ಘಟನೆಗಳ ಜೊತೆ ನಿಕಟವಾಗಿ ಬೆಸುಗೆಗೊಂಡಿವೆ ಎಂದು ಭಾವಿಸಿದರು. ಭೂಮಿಯಿಂದ ಗ್ರಹಗಳಿಗಿರುವ ಹಿರಿದೂರಗಳ ಅಂದಾಜು ಅವರಿಗಿರಲಿಲ್ಲ. ಈಗ ಆ ದೂರಗಳನ್ನು ಗಣಿಸಬಹುದು, ಗಣಿಸಲಾಗಿದೆ ಕೂಡ. ಆದ್ದರಿಂದ ದೂರದ ಗ್ರಹಗಳೂ ಇವುಗಳಿಂದ ಅವೆಷ್ಟೋ ಅಧಿಕ ಅಂತರಗಳಲ್ಲಿ ಹರಡಿಹೋಗಿರುವ ನಕ್ಷತ್ರಗಳೂ ಭೂಮಿಯಲ್ಲಿ ಉತ್ಪಾದಿಸುವ ಗುರುತ್ವಾಕರ್ಷಣೀಯ ಮತ್ತು ಇತರ ಪರಿಣಾಮಗಳು ಎಷ್ಟು ಅನಂತಾಲ್ಪ ಎಂಬುದನ್ನು ಈಗ ಅರಿಯಬಲ್ಲೆವು. ಜನನ ಕ್ಷಣದಲ್ಲಿ ನಕ್ಷತ್ರಗಳು ಮತ್ತು ಗ್ರಹಗಳು ನಮ್ಮ ಮೇಲೆ ಬೀರುವ ಬಲಗಳು ಯಾವುದೇ ರೀತಿಯಲ್ಲಿ ನಮ್ಮ ಭವಿಷ್ಯವನ್ನು ರೂಪಿಸಬಲ್ಲವೆಂದು ಊಹಿಸುವುದು ಕೂಡ ಶುದ್ಧಾಂಗ ಅವಿವೇಕ. ದೂರದ ಆಕಾಶಕಾಯಗಳ ಸ್ಥಾನಗಳು ಕೆಲವು ದಿವಸಗಳನ್ನು ಇಲ್ಲವೇ ಅವಧಿಗಳನ್ನು ವಿಶಿಷ್ಟ ಕೆಲಸಗಳಿಗೆ ಅಧಿಕ ಪ್ರಶಸ್ತವಾಗಿ ಮಾಡುವುವೆಂಬುದಾಗಲೀ ಒಬ್ಬ ವ್ಯಕ್ತಿಯ ಜನನ ತಾರೆ ಆತ ಇತರರೊಂದಿಗೆ ಸರಿಹೊಂದುವುದನ್ನು ಅಥವಾ ಹೊಂದದಿರುವುದನ್ನು ನಿರ್ಧರಿಸುವುದೆಂಬುದಾಗಲೀ ಖಂಡಿತ ನಿಜವಲ್ಲ.

"ಜನ ಫಲಜ್ಯೋತಿಷ್ಯವನ್ನೇಕೆ ನಂಬುತ್ತಾರೆ ? ಇಂದಿನ ಅನಿಶ್ಚಿತ ಸನ್ನಿವೇಶಗಳಲ್ಲಿ ಯುಕ್ತ ನಿರ್ಧಾರ ತಳೆಯಲು ಯೋಗ್ಯ ಮಾರ್ಗದರ್ಶನಲಾಭ ತಮಗೆ ಅಗತ್ಯವೆಂಬುದು ಬಹುಮಂದಿಯ ಆಶಯ. ತಮ್ಮ ನಿಯಂತ್ರಣಕ್ಕೆ ಅಧೀನವಾಗಿರುವ ನಾಕ್ಷತ್ರಿಕ ಬಲಗಳಿಂದ ಪೂರ್ವನಿರ್ಧಾರಿತವಾಗಿರುವ ಅದೃಷ್ಟದಲ್ಲಿ ಭರವಸೆ ಇಡುವುದು ಅವರ ಅಪೇಕ್ಷೆ. ಪ್ರತಿ ವ್ಯಕ್ತಿಯೂ ಪ್ರಪಂಚವನ್ನು ಎದುರಿಸಲೇಬೇಕು. ಪ್ರತಿಯೊಬ್ಬನ ಭವಿಷ್ಯವೂ ಆತನ ಕೈಯಲ್ಲಿಯೇ ಇದೆ. ಈ ಸಂಗತಿಗಳನ್ನು ಎಲ್ಲರೂ ತಿಳಿದಿರಬೇಕಾದದ್ದು ಅತ್ಯಗತ್ಯ.

"ವರ್ತಮಾನ ದಿನಗಳಲ್ಲಿ ಜ್ಞಾನ ಮತ್ತು ವಿದ್ಯೆ ವ್ಯಾಪಕವಾಗಿ ಪಸರಿಸಿವೆ. ಅಂದ ಮೇಲೆ ಇಂದ್ರಜಾಲ ಮತ್ತು ಮೂಢಭಾವನೆಗಳ ಮೇಲೆ ನಿಂತಿರುವ ನಂಬಿಕೆಗಳ ಖೊಟ್ಟಿತನ ಎತ್ತಿತೋರಿಸುವ ಅಗತ್ಯವೇನಿದೆ ಎಂದು ಒಬ್ಬ ಕೇಳಬಹುದು. ಆದರೆ ನಿಜಸ್ಥಿತಿ ಹೀಗಿಲ್ಲ : ಫಲಜ್ಯೋತಿಷ್ಯ ಆಧುನಿಕ ಸಮಾಜದಲ್ಲಿ ವ್ಯಾಪಕ ಪ್ರಸಾರ ಪಡೆದಿದೆ. ಫಲಜ್ಯೋತಿಷಿಗಳು ಒದಗಿಸುವ ಯಾದಿ, ಭವಿಷ್ಯವಾಣಿ, ಮತ್ತು ಜಾತಕಗಳನ್ನು ಸಮೂಹ ಮಾಧ್ಯಮಗಳು, ಹಾಗೂ ಅನ್ಯತ್ರ ವಿಶ್ವಾಸಾರ್ಹ ದೈನಿಕಗಳು, ಸಾಪ್ತಾಹಿಕಗಳು ಮತ್ತು ಪುಸ್ತಕ ಪ್ರಕಾಶನಗಳು ಯಾವುದೇ ಬಗೆಯ ವಿಮರ್ಶೆಗೆ ಒಡ್ಡದೇ ಸತತವಾಗಿ ಪ್ರಕಟಿಸುತ್ತಿರುವುದು ಕಂಡು ನಮಗೆ ವಿಶೇಷ ಚಿಂತೆ ಆಗಿದೆ. ಇದರ ದುಷ್ಟ ಉಪ್ರೋತ್ಪನ್ನವಾಗಿ ವಿಚಾರಹೀನತೆ ಮತ್ತು ಅಂಧಶ್ರದ್ಧೆ ಪ್ರಬಲಿಸುವುದು ಖಾತ್ರಿ. ಫಲಜ್ಯೋತಿಷಿಗಳೆಂಬ ಡೋಂಗಿ ಮಂದಿಯ ಡೌಲು, ಅಬ್ಬರ, ಬೊಬ್ಬೆಗಳನ್ನು ನೇರವಾಗಿಯೂ ಶಕ್ತಿಯುತವಾಗಿಯೂ ವಿರೋಧಿಸಲು ಕಾಲ ಮಾಗಿದೆ ಯೆಂದು ಭಾವಿಸಿದ್ದೇವೆ.

"ಫಲಜ್ಯೋತಿಷ್ಯದಲ್ಲಿ ವಿಶ್ವಾಸವಿರುವ ಜನರಿಗೆ ಒಂದು ಸಂಗತಿ ಮನವರಿಕೆ ಮಾಡಿಕೊಡಬೇಕು. ಅವರ ನಂಬಿಕೆಗಳಿಗೆ ಆಧಾರವಾಗಿ, ತಪಾಸಣೆಗೆ ಒಳಪಡಿಸಿದ, ಯಾವುದೇ ವೈಜ್ಞಾನಿಕ ಸಾಕ್ಷ್ಯವಿಲ್ಲ, ನಿಜಕ್ಕೂ ಪ್ರಬಲ ವ್ಯತಿರಿಕ್ತ ಪುರಾವೆ ಉಂಟು."

ಇದೇ ಸಂದರ್ಭದಲ್ಲಿ ಇನ್ನೊಂದು ವಿಚಾರವನ್ನೂ ಪ್ರಸ್ತಾವಿಸಬಹುದು.

ಅಂತಾರಾಷ್ಟ್ರೀಯ 'ಖ್ಯಾತಿ' ಗಳಿಸಿರುವ ಇಬ್ಬರು ಭಾರತೀಯ ಫಲ

ಜ್ಯೋತಿಷಿಗಳ ವೈಯಕ್ತಿಕ ದುರಂತಗಳಿವು : ಒಬ್ಬರ ಅಳಿಯ—ನಡುಹರೆಯದ ಆರೋಗ್ಯವಂತ ಗೃಹಸ್ಥ— ಹಠಾತ್ತನೆ ಹೃದಯಸ್ತಂಭನದಿಂದ ಮೃತನಾದ ; ಇನ್ನೊಬ್ಬರು ಪ್ರಸಿದ್ಧ ನಗರವೊಂದರಲ್ಲಿ ಐಷಾರಾಮವಾಗಿ ತಮ್ಮ ಧಂಧೆಯಲ್ಲಿ ಮುಳುಗಿದ್ದಾಗಲೇ ಇನ್ನೊಂದು ಮಹಾನಗರದಲ್ಲಿದ್ದ ಅವರ ಭವ್ಯ ಸುಭದ್ರ ಸುಸಜ್ಜಿತ ಕೋಟೆಮನೆಯನ್ನು ದರೋಡೆಕೋರರು ಒಡೆದು ಲೂಟಿ ಮಾಡಿದರು.

ಈ ವಾಸ್ತವ ಘಟನೆಗಳನ್ನು ದಾಖಲಿಸುವಾಗ ನನಗೆ ಸಂತೋಷವಾಗುತ್ತಿಲ್ಲ, ಅಥವಾ ನಾನು "ಗೆದ್ದ" ಎಂಬ ಹೆಮ್ಮೆ ಮೂಡುತ್ತಿಲ್ಲ. ಆದರೆ ಸ್ವತಃ ತಮ್ಮ ಭವಿಷ್ಯಗಳನ್ನೇ ಕಾಣಲಾಗದಿದ್ದ ಈ ಗಾವಿಲರು ಇತರರವನ್ನು ಹೇಗೆ ತಾನೇ ಕಂಡಾರು! ಅಸಹಜ ಕಸಬಿನ ಮೂಲಕ ಅನೀತಿಯುತ ಉತ್ಪತ್ತಿಗಳಿಸಿ ಅಸಮಾಜದ ರೂಪಣೆಗೆ ನೆರವಾಗುವವರ ಬಗ್ಗೆ ಜನ ಅತಿ ಜಾಗರೂಕರಾಗಿರಲೇಬೇಕು.

೬ "ಪ್ರಾಚೀನ ಯುಗಗಳಿಂದ ವರ್ತಮಾನ ದಿನಗಳ ತನಕವೂ ಫಲಜ್ಯೋತಿಷ್ಯ ಮಾನವನ ಒಡನಾಡಿಯಾಗಿಯೂ ಹಿತೈಷಿಯಾಗಿಯೂ ಬೆಳೆದು ಅಭಿವರ್ಧಿಸಿದೆ. ಸ್ವಂತ ಅಂತಸ್ಸತ್ತ್ವವಿದ್ದ ಹೊರತು ಇದು ಸಾಧ್ಯವಾಗಿರುತ್ತಿತ್ತೇ ? ವಿಜ್ಞಾನ ಹೀಗಲ್ಲ. ಉದಾಹರಣೆಗೆ ಆರ್ಕಿಮಿಡೀಸ್ ಹೇಳಿದ್ದನ್ನು ನ್ಯೂಟನ್, ನ್ಯೂಟನ್ ಹೇಳಿದ್ದನ್ನು ಐನ್‌ಸ್ಟೈನ್, ಇತ್ಯಾದಿ, ಅಲ್ಲಗಳೆದಿರುವುದೂ ನೂತನ ಸಿದ್ಧಾಂತಗಳನ್ನು ಮಂಡಿಸುತ್ತಿರುವುದೂ ಎದ್ದು ಕಾಣುತ್ತವೆ. ವಿಶ್ವವನ್ನು ಅಖಂಡ ಸತ್ಯವಾಗಿ ಗ್ರಹಿಸಲಾಗದ, ಎಲ್ಲವನ್ನೂ ಬಿಡಿಬಿಡಿಯಾಗಿ ಒಡೆದೊಡೆದು ನೋಡುವ, ಒಬ್ಬ ಹೇಳಿದ್ದನ್ನು ಇನ್ನೊಬ್ಬ ಖಂಡಿಸುವ ಅಥವಾ ನಿರಾಕರಿಸುವ ಈ ನಿತ್ಯ ಚಂಚಲಮತಿಗಳ ಮಾತುಗಳನ್ನು ನಂಬಬಹುದೇ ? ಇವರ ವಾದಗಳನ್ನು ಅಂಗೀಕರಿಸಬಹುದೇ ?"

ಒಂದು ವಸ್ತು ಅಥವಾ ವಿಷಯ ಎಷ್ಟು ಹಳೆಯದು, ಎಷ್ಟು ಕಾಲದಿಂದ ಚಲಾವಣೆಯಲ್ಲಿದೆ, ಅಥವಾ ಅದನ್ನು ಎಷ್ಟು ಜನ ಒಪ್ಪಿದ್ದಾರೆ ಎನ್ನುವ ಜ್ಞಾತೃನಿಷ್ಠ ಮಾನಕಗಳಿಂದ ಅದರ ಸತ್ಯಾಸತ್ಯತೆಗಳು ನಿರ್ಣಯವಾಗುವುದಿಲ್ಲ. ಅದು ಕಾರ್ಯ-ಕಾರಣ ನಿಕಷದಲ್ಲಿ, ಅಂದರೆ ಪ್ರಯೋಗದ ಋಜುತಲದಲ್ಲಿ, ಉತ್ತೀರ್ಣವಾಗುವುದೇ ಎಂಬ ಪ್ರಶ್ನೆಯೊಂದೇ ಇಲ್ಲಿ ಪ್ರಸ್ತುತವಾದದ್ದು. ಫಲಜ್ಯೋತಿಷ್ಯ ಅಂದಾಗಲೀ ಇಂದಾಗಲೀ ಪ್ರಯೋಗದ

ಋಜುತಲವನ್ನು ಆಧರಿಸಿ ನಿಂತಿಲ್ಲ. ಕಾರ್ಯಕಾರಣ ಪರೀಕ್ಷೆಯನ್ನು ಎದುರಿಸಿ ಉತ್ತೀರ್ಣವಾಗಿಲ್ಲ. ಅಂತೆಕಂತೆಗಳು, ಹುಸಿನಂಬಿಕೆಗಳು, ಅಂಧಭಾವನೆಗಳು, ಜನರ ಅಗಾಧ ಅಜ್ಞಾನ ಮುಂತಾದವೇ ಇದರ ಬಂಡವಾಳ. ಆಧಾರರಹಿತ ಕಲ್ಪನೆ ಮತ್ತು ಅವಾಸ್ತವ ತರ್ಕಗಳ ಅಪವಿತ್ರ ಸಂತಾನವೇ ಫಲಜ್ಯೋತಿಷ್ಯ.

ಅಂದಹಾಗೆ ಮನುಕುಲದ ಶಾಶ್ವತ ಒಡನಾಡಿಗಳು ಎರಡು : ವ್ಯಭಿಚಾರ—ಇದು ಒಡಲಿಗೆ ಹತ್ತಿದ ಜುಗು ; ಫಲಜ್ಯೋತಿಷ್ಯ—ಇದು ಮನಕ್ಕೆ ನಾಟಿದ ಗೆದ್ದಲು. ಇವು ವಿಜ್ಞಾನಗಳೇ ? ಅನಿವಾರ್ಯಗಳೇ ? ಗಮನಾರ್ಹಗಳೇ ? ವಿಚಾರಯೋಗ್ಯಗಳೇ ?

ಇನ್ನು ವಿಜ್ಞಾನದ ದೊಂಬರಲಾಗಗಳು. ಸನೇಕಾನ ಅರ್ಥಪೂರ್ಣ ನುಡಿಗಳನ್ನು ಈ ಹಿಂದೆಯೇ ಉಲ್ಲೇಖಿಸಿದೆ. ಇರುವುದೊಂದೇ ಋತ. ಅದರ ಅನಂತಾಲ್ಪ ಅಂಶವಾಗಿ ಅದನ್ನು ಪಂಚೇಂದ್ರಿಯಗಳ ಮೂಲಕ ಕಾಲದೇಶಾತೀತವಾಗಿ ಅನುಭವಿಸುತ್ತಿರುವಾತ ಅದೇ ಮಾನವ. ಈತನ ದಿಗ್ಭ್ರಾಂತ ಅನುಭವ ಕುರಿತು ಪ್ರಸಿದ್ಧ ಪುರುಷರು ಉದ್ಗರಿಸಿರುವ ನುಡಿಗಳಿವು :

"ಸತ್ಯಶೋಧನೆ ಕುರಿತು ಹೇಳುವುದಾದರೆ, ಹಲವಾರು ಕುರುಡುಗಲ್ಲಿಗಳಿಂದ ಕೂಡಿರುವ ಈ ಪ್ರದೇಶದಲ್ಲಿ ನಿಜಕ್ಕೂ ಅರ್ಥವತ್ತಾದುದನ್ನು ಅರಿಯುವತ್ತ ಎಷ್ಟೇ ಚಿಕ್ಕದಾದದ್ದಾದರೂ ವಿಶ್ವಾಸಾರ್ಹವಾದ ಒಂದು ಹೆಜ್ಜೆ ಇಡುವುದು ಎಷ್ಟು ಕಷ್ಟ ಎಂಬುದು ಸ್ವಂತ ಕಠಿಣ ಪರಿಶೋಧನೆಯಿಂದ ನನಗೆ ವೇದ್ಯವಾಗಿದೆ." ಐನ್‌ಸ್ಟೈನ್

"ನಾನು ಇತರರಿಗಿಂತ ತುಸು ಆಚೆಗೆ ನೋಡಿರುವುದು ನಿಜವಾಗಿದ್ದರೆ ದೈತ್ಯರ ಹೆಗಲ ಮೇಲೆ ನಿಂತಿರುವುದೇ ಅದರ ಕಾರಣ......ಲೋಕಕ್ಕೆ ನಾನು ಹೇಗೆ ಕಾಣುವೆನೋ ಊಹಿಸಲಾರೆ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ನಾನೊಬ್ಬ ಕಡಲಕಿನಾರೆಯಲ್ಲಿ ಆಟವಾಡುತ್ತಿರುವ ಕಿರಿಹೈದ ಮಾತ್ರ. ಆಗ ಈಗ ನುಣುಪಾದ ಒಂದು ಹರಳನ್ನೋ ಚೆಲುವಾದ ಒಂದು ಚಿಪ್ಪನ್ನೋ ನಾನು ಹೆಕ್ಕಬಹುದು. ಆದರೆ ನನ್ನಿಯ ಹೆಗ್ಗಡಲಿಡೀ ನನ್ನೆದುರು ಅನನ್ವೇಷಿತವಾಗಿ ಚೆಲ್ಲಿಕೊಂಡಿದೆ." ನ್ಯೂಟನ್

ದಿಟ್ಟಿಸುತ ಕತ್ತಲೆಯ ವೊತ್ತವನು ನಿಂತೆ—ಭಯ<br>
ವಿಸ್ಮಯಂದಿ ಬಲುಕಾಲ ಕಣ್ಣಾಣದೇ<br>
ಸಂದೇಹಿಸುತ, ಮನುಜಕುಲ ಕಂಡಿರದ ಕನಸ<br>
ನಾಕಾಣ್ಬೆನೆಂಬ ಮಹದಾಶಯದಲಿ !

ಎಡ್ಗರ್ ಅಲನ್‌ಪೋ

"ಬಹಳ ಹಿಂದೆಬಾಳಿದ ಒಬ್ಬ ವ್ಯಕ್ತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ನೀನು ಆತನ ಪರಿಸರವನ್ನೂ ಆತ ಯಾವ ನಿರ್ಬಂಧಗಳ ಹಿಡಿತದಲ್ಲಿ ಬಾಳಿದ ಎಂಬುದನ್ನೂ ಆತನ ಮನಸ್ಸನ್ನು ಆವರಿಸಿದ್ದ ಭಾವನೆಗಳನ್ನೂ ತಿಳಿದು ಕೊಳ್ಳಬೇಕು. ಗತಕಾಲದ ಜನರನ್ನು ಅವರು ಇಂದು ಬಾಳುತ್ತಿರುವವರೋ ನಮ್ಮಂತೆ ಯೋಚಿಸುತ್ತಿರುವವರೋ ಎಂಬುದಾಗಿ ಪರಿಭಾವಿಸುವುದು ಶುದ್ಧಾಂಗ ತಪ್ಪು. ಇಂದು ಗುಲಾಮಗಿರಿಯನ್ನು ಯಾರೂ ಬೆಂಬಲಿಸುವುದಿಲ್ಲ. ಇಂತಿದ್ದರೂ ಅದು ಅಗತ್ಯವೆಂಬ ನಿಲವನ್ನುಪ್ಲ್ಯಾಟೊ ತಳೆದಿದ್ದುದನ್ನುಕಾಣು ತ್ತೇವೆ. ಗುಲಾಮಗಿರಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಈಚೆಗಿನ ವರ್ಷಗಳಲ್ಲಿ ಸಾವಿರಾರು ಜನರ ಬಲಿ ತೆಗೆದು ಕೊಂಡಿದೆ. ಗತಕಾಲವನ್ನು ವರ್ತಮಾನಕಾಲದ ಶಿಷ್ಟಮಾನಕಗಳಿಂದ ಅಳೆ ಯುವುದು ಅಬದ್ಧ ಎಂಬುದನ್ನು ಎಲ್ಲರೂ ಮನಃಪೂರ್ವಕವಾಗಿ ಅನುಮೋದಿ ಸುತ್ತಾರೆ. ಆದರೆ ವರ್ತಮಾನಕಾಲವನ್ನು ಗತಕಾಲದ ಶಿಷ್ಟಮಾನಕಗಳಿಂದ ಅಳೆಯುವುದು ಅಷ್ಟೇ ಅಬದ್ಧ ಎಂಬುದನ್ನು ಯಾರೂ ಒಪ್ಪುವುದಿಲ್ಲ, ಮುಖ್ಯವಾಗಿ ನಮ್ಮ ಅನೇಕ ಮತಧರ್ಮಗಳು ಮಾಡಿರುವುದು ಇದನ್ನೇ: ಹಳೆಯ ನಂಬಿಕೆ ಪಂಥ ಮತ್ತು ನಡವಳಿಕೆಗಳು ತಮ್ಮ ಜನ್ಮಸ್ಥಳದಲ್ಲಿ ಮತ್ತು ಕಾಲದಲ್ಲಿ ಒಂದಿಷ್ಟು ಉಪಯುಕ್ತತೆ ಪಡೆದಿದ್ದರೂ ಇಂದಿಗೆ ಪೂರ್ತಿ ಅಪ್ರಸ್ತುತ ಎಂಬುದನ್ನು ಮನಗಾಣದೇ ಈ ಎಲ್ಲ ಬಂದಿಳಿಕೆಗಳೂ ಜಡ್ಡುಕಟ್ಟಲು ನೆರ ವಾಗಿರುವುದು." ಜವಾಹರ್‌ಲಾಲ್ ನೆಹರೂ

೭ "ನೀವು ಹೇಳುತ್ತಿರುವುದು ನನ್ನ ಬುದ್ಧಿಗೆ ನಾಟುತ್ತದೆ, ಹೃದಯಕ್ಕೆ ಇಳಿಯುವುದಿಲ್ಲ. ಸಂಕಟ ಬಂದಾಗ ಮೊದಲ ಹೆಜ್ಜೆಯಾಗಿ ಇಲ್ಲಿಯೇ ಪರಿ ಹಾರ ಅರಸಲು ಹೆಣಗುತ್ತೇನೆ. ಆದರೆ ನನ್ನ ಪ್ರಯತ್ನ ಕೈಮೀರಿದಾಗ ಮನಸ್ಸಿಗೆ ನೆಮ್ಮದಿ ಗಳಿಸಲು ಜಾತಕ ನೋಡಿಸುವುದು, ಹರಕೆ ಒಪ್ಪಿಸುವುದು, ದಾನ ನೀಡುವುದು ಮುಂತಾದ ವಿಜ್ಞಾನೇತರ ಕ್ರಿಯೆಗಳಿಗೆ ಶರಣಾಗುವುದು ಅನಿವಾರ್ಯವೆನ್ನಿಸುತ್ತದೆ. ಅಂದರೆ ದೇವರ ಮೇಲೆ ಭಾರ ಹಾಕಿ ಹಗುರಾ ಗುವುದೆಂದರ್ಥ. ಇದು ತಪ್ಪೇ ? ವ್ಯಕ್ತಿಗೆ ತಾನೇನು ಮಾಡಬೇಕೆಂಬ ಸ್ವಾತಂತ್ರ್ಯವಿದೆಯಷ್ಟೆ ? ಇದನ್ನು ಹತ್ತಿಕ್ಕಿದಾಗ ಏನಾಗುವುದೆಂಬುದಕ್ಕೆ ಇತಿಹಾಸದ ಉದ್ದಕ್ಕೂ ಪುರಾವೆಗಳು ದೊರೆಯುತ್ತವೆ."

ಪರಂಪರೆಯ ಶಿಶುವಾದ ಮಾನವ, ಅದನ್ನು ಪ್ರಶ್ನಿಸದೇ, ಪ್ರಾಚೀನ

ವಾದದ್ದೆಲ್ಲವೂ ಆ ಕಾರಣದಿಂದಲೇ ಪವಿತ್ರವೂ ಹೌದು ಎಂದು ಪ್ರಶ್ನಾರಹಿತ ವಾಗಿ ಅಂಗೀಕರಿಸಿ ಅದಕ್ಕೆ ತನ್ನನ್ನು ಅಂಧವಿನೀತತೆಯಿಂದ ಒಪ್ಪಿಸಿಕೊಂಡಿರು ವುದಕ್ಕೆ 'ದಿವ್ಯ' ನಿದರ್ಶನವಿದು. ಬಹುಸಂಖ್ಯಾತರು—ಅನ್ಯತ್ರ ಮೇಧಾವಿ ಗಳು, ಸುಶಿಕ್ಷಿತರು ಮತ್ತು ಲೌಕಿಕ ಜೀವನದಲ್ಲಿ ಯಶಸ್ಸು ಕಂಡವರು— ಬದುಕುತ್ತಿರುವುದು ಹೀಗೆಯೇ.

ಹಗಲಿಡೀ ವಿಜ್ಞಾನದ ಜೊತೆ ಕೆಲಸವೆಸಗಿ, ಕಾರಣರಹಿತ ಕಾರ್ಯವಿಲ್ಲ ಎಂದು ಅರಿತಿರುವ, ಯಾವುದೇ ಕಾರ್ಯದ ಕಾರಣ ತಿಳಿಯದಾಗ, ಅದನ್ನು (ಕಾರಣ) ಇನ್ನಷ್ಟು ಶ್ರದ್ಧಾಪೂರ್ವಕ ಸಾಹಸದಿಂದ ಅನ್ವೇಷಿಸಿ ಪಡೆಯ ಬೇಕೇ ಹೊರತು ಅಜ್ಞಾತ ಪರಮಾತ್ಮನಿಗೋ ಅತಿದೂರದ ಗ್ರಹಗಳಿಗೋ ವರ್ಗಾಯಿಸಿ ಮರೆತುಬಿಡುವುದು ಸಲ್ಲ ಎಂದು ಆಚರಿಸುತ್ತಿರುವ, ಮತ್ತು ಸಫಲ ಸುದೀರ್ಘ ವೈಜ್ಞಾನಿಕ ಪ್ರಯತ್ನಕ್ಕೆ ಮಣಿಯದ ಸಮಸ್ಯೆ ಯಾವುದೂ ಇಲ್ಲವೆಂಬ ಭರವಸೆಯಿಂದ ಸದಾ ಕಾರ್ಯನಿರತರಾಗಿರುವ ಮೇಧಾವಿಗಳು ಕೂಡ ಫಲಜ್ಯೋತಿಷಿಗಳ ಮುಂದೆಯೋ ಪುರಾಣದ ಪೊಳ್ಳು ಬುರುಡೆಗಳನ್ನು ಅತಿ ರಂಜನೀಯವಾಗಿ ಹೊಸೆಯುವ ಪ್ರವಚನಕಾರರ ಮುಂದೆಯೋ ತಲೆ ಬಾಗಿ ಕೈಮುಗಿದು ಕುಳಿತಿರುವುದು, ಅವರು ಗಳಹಿದ್ದನ್ನೆಲ್ಲ ಮೂಕವಿಧೇಯತೆ ಯಿಂದ ಸ್ವೀಕರಿಸುವುದು, ಮತ್ತು ತಾವು ಶಿಕ್ಷಣದಲ್ಲಿ ಹಾಗೂ ವೃತ್ತಿ ಜೀವನ ದಲ್ಲಿ ಕಲಿತ ಕಠಿಣ ಪರಿಕಲ್ಪನೆ ಮೌಲ್ಯಗಳಿಗೂ ಈ ಮಂಪರುಕಾರಕ ಪದ ಸಮುಚ್ಚಯಗಳಿಗೂ ನಡುವೆ ಸಂಬಂಧ ಕಲ್ಪಿಸತಕ್ಕದ್ದಲ್ಲ, ಇವು ಬೇರೆ ಬೇರೆ ವಾತಬಂಧ ಖಾತೆಗಳು ಎಂದು ಪ್ರಾಮಾಣಿಕವಾಗಿ ಭಾವಿಸಿ ತದನುಗುಣವಾಗಿ ವರ್ತಿಸುವುದು ಸ್ವತಃ ಆ ವ್ಯಕ್ತಿಗಳ ಸರ್ವಾಂಗೀಣ ಶ್ರೇಯಸ್ಸಿಗೆ ಹಾನಿಕಾರಿ. ಜೀವನ ಅಖಂಡವಾದದ್ದು. ವ್ಯಕ್ತಿ ಇದರಲ್ಲಿ ಸ್ವಾಸ್ಥ್ಯ ಗಳಿಸಬೇಕಾದದ್ದು ವೃತ್ತಿ ಜೀವನದ ಬಗ್ಗೆ ಮೌಲ್ಯನಿಷ್ಠ ನಿಲವು ತಳೆಯುವುದರಿಂದ, ಸಹಚರರನ್ನು ಕುರಿತು ಕಳಕಳಿ ಪ್ರದರ್ಶಿಸುವುದರಿಂದ, ನೈತಿಕ ಪ್ರಜ್ಞೆಯನ್ನು ಸದಾ ಕಾಪಾಡಿ ಕೊಂಡು ಬರುವುದರಿಂದ, ಹಾಗೂ ಸಮಾಜೋಪಯುಕ್ತ ಸೇವೆಯನ್ನು ನಿಸ್ವಾರ್ಥ ಮನೋಭಾವದಲ್ಲಿ ಸಲ್ಲಿಸುವುದರಿಂದ. ತನ್ನ ವೃತ್ತಿಜೀವನದ ಹೊರಗೆ ಶಾಂತಿ ಅರಸುವಾತ ಇಲ್ಲಿ (ವೃತ್ತಿ) ಅದನ್ನು ಕಳೆದುಕೊಳ್ಳುತ್ತಾನೆ, ಅಲ್ಲಿ (ಹೊರಗೆ) ಅದನ್ನು ಗಳಿಸುವುದಿಲ್ಲ. ಇಲ್ಲಿ ಸಲ್ಲದ್ದು ಅಲ್ಲಿಯೂ ಸಲ್ಲು ವುದಿಲ್ಲ.

೮ ಹಾಗಾದರೆ ನಾವೇನು ಮಾಡಬೇಕು ?

* ನೀವು ಕುರಿಗಳಾಗತಕ್ಕದ್ದಲ್ಲ. ಆಗ ಮಾತ್ರ ಹುಲಿಗಳು ಪ್ರವರ್ಧಿಸುವುದಿಲ್ಲ. ಇದರ ಅರ್ಥ : ನೀವು ಸ್ವಂತತ್ವ ಬೆಳೆಸಿಕೊಳ್ಳತಕ್ಕದ್ದು. ಹೇಗೆ ? ತಾರ್ತಿಕವಾಗಿ ಚಿಂತನೆ ಮಾಡಿ. ಅವರಿವರು ಹೇಳಿದರೆಂದು ನಂಬಬೇಡಿ— ಖುದ್ದು ನಾನು ಇಲ್ಲಿ ಬರೆದಿರುವುದನ್ನು ಕೂಡ ! ಗೊತ್ತಾಗದಿದ್ದರೆ ಯುಕ್ತ ಪುಸ್ತಕ ಓದಿ, ಬಲ್ಲವರೊಡನೆ ಚರ್ಚಿಸಿ, ಪ್ರಯೋಗ ಮಾಡಿನೋಡಿ.

ನಂಬದಿರು ಏನನ್ನೂ
ಕೇವಲ ಅದು ನಿನಗೆ ಹೇಳಲ್ಪಟ್ಟಿದೆ ಎಂಬುದಕ್ಕಾಗಿ
ಅಥವಾ ಅದು ಪರಂಪರಾಗತ ಎಂಬುದಕ್ಕಾಗಿ
ಅಥವಾ ಸ್ವತಃ ನೀನೇ ಅದನ್ನು ಊಹಿಸಿರುವೆ ಎಂಬುದಕ್ಕಾಗಿ
ಕೇವಲ ಉಪಾಧ್ಯಾಯನ ಬಗೆಗಿನ ಗೌರವಕ್ಕಾಗಿ
ಆತ ಹೇಳಿದ್ದನ್ನು ನಂಬದಿರು
ಆದರೆ ಗಹನ ಪರೀಕ್ಷಣೆ ವಿಶ್ಲೇಷಣೆಗಳಿಗೆ
ಒಡ್ಡಿದಾಗ ಯಾವುದು ಸರ್ವಜೀವಿಗಳ
ಉತ್ಕರ್ಷೆಗೆ ಕ್ಷೇಮಕ್ಕೆ
ಸಹಕಾರಿ ಎಂದರಿಯುವೆಯೋ
ಆ ತತ್ತ್ವವನ್ನು ನಂಬು
ಮತ್ತು ಅದಕ್ಕೆ ಶರಣಾಗಿ ಅದನ್ನು
ನಿನ್ನ ಮಾರ್ಗದರ್ಶಿ ಎಂದು ಸ್ವೀಕರಿಸು

ಬುದ್ಧ

* ಸುಪ್ತಸಾಮರ್ಥ್ಯವನ್ನು ವ್ಯಕ್ತಕ್ರಿಯೆಯಾಗಿ ಪರಿವರ್ತಿಸತಕ್ಕದ್ದು.

ಪ್ರತಿಯೊಬ್ಬನಲ್ಲಿಯೂ ನಿಸರ್ಗ ಮಹಾಮಾನವನಾಗಬಲ್ಲ ಸಾಮರ್ಥ್ಯವನ್ನು ಹುದುಗಿಸಿಟ್ಟಿದೆ. ಸತತ ಪ್ರಯತ್ನ ಸಾಧನೆಗಳಿಂದ ಮಾತ್ರ — ಕಂದಾಚಾರಗಳಿಗೆ, ಭವಿಷ್ಯವಾಚನದಂಥ ಪಲಾಯನವಾದಗಳಿಗೆ ಶರಣಾಗುವುದರಿಂದ ಎಂದಿಗೂ ಅಲ್ಲ — ನೀವು ಆ ಸಾಮರ್ಥ್ಯವನ್ನು ಉಪಯುಕ್ತ ಕಾರ್ಯವಾಗಿ ಮಾರ್ಪಡಿಸಬಲ್ಲಿರಿ. ಜಲಾಶಯ ತುಂಬಿದೆ ನಿಜ. ಆದರೆ ನೀರಿಗೆ ಕೆಳ ದುಮುಕಲು ಹಾದಿ ? ಹರಿಯಲು ಕಾಲುವೆ ?

ಉನ್ನತ ಸ್ಥಾನವನ್ನೇರಿಹ ವಿಭೂತಿ ಪುರುಷರ್ ಥಟ್ಟನೇರಿದುದಲ್ಲ ಗುರಿಗೆ
ಷರ್ ಭೋಂಕನೆಯ ಪಾರ್ದರಿಲ್ಲ ಗುರಿಗೆ
ನಿದ್ರಾಸವಸಾಧಿಯೊಳ್ ಬಾಂಧವರ್ ಕೆಡೆದಿರಲ್
ಶ್ರಮಿಸಿ ಏರಿಹರು ಧ್ರುವತಾರೆಯೆಡೆಗೆ

ಲಾಂಗ್‌ಫೆಲೋ

ನಿಸರ್ಗ ನಿಯಮಂಗಳಿಗೆ ಅತೀತವಾದವು ಯಾವುವೂ ಇಲ್ಲ ಎಂದು ಅರಿತು ತದನುಗುಣವಾಗಿ ನಿಮ್ಮ ಬದುಕನ್ನು ರೂಪಿಸಿಕೊಳ್ಳತಕ್ಕದ್ದು.

ನ್ಯೂಯಾರ್ಕ್ ನಗರದ ಒಂದು ಸಂಡೇ ಸ್ಕೂಲಿನ ಆರನೆಯ ತರಗತಿಯಲ್ಲಿದ್ದ ಒಬ್ಬಳು ಹೆಣ್ಣು ಮಗು ತನ್ನ ಶಿಕ್ಷಕಿಯ ಪ್ರೋತ್ಸಾಹದ ಮೇರೆಗೆ, ಆಗ ಪ್ರಿನ್ಸ್‌ಟನ್ನಿನಲ್ಲಿದ್ದ ಐನ್‌ಸ್ಟೈನರಿಗೆ, ೧೯೩೬ ಜನವರಿ ೧೯ರಂದು ಕಾಗದ ಬರೆದು ವಿಜ್ಞಾನಿಗಳು ಪ್ರಾರ್ಥನೆ ಸಲ್ಲಿಸುವರೇ, ಮತ್ತು ಸಲ್ಲಿಸುವುದಾದಲ್ಲಿ ಯಾವುದನ್ನು ಕುರಿತು ಸಲ್ಲಿಸುವರು ಎಂಬುದಾಗಿ ಕೇಳಿದಳು. ಐನ್‌ಸ್ಟೈನ್ ೧೯೩೬ ಜನವರಿ ೨೪ರಂದು ಮಾರೋಲೆ ಬರೆದರು :

"ನಿನ್ನ ಪ್ರಶ್ನೆಗೆ ನನ್ನ ಅನಿಸಿಕೆಗಳನ್ನು ಸಾಧ್ಯವಾದಷ್ಟೂ ಸರಳವಾಗಿ ಬರೆಯಲು ಪ್ರಯತ್ನಿಸಿದ್ದೇನೆ. ಇಲ್ಲಿದೆ ನನ್ನ ಉತ್ತರ.

"ಪ್ರತಿಯೊಂದು ಘಟನೆಯೂ ನಿಸರ್ಗನಿಯಮಂಗಳಿಂದ ನಿರ್ಧರಿತವಾಗಿರುವುದೆಂಬ ಭಾವನೆಯನ್ನು ಆಧರಿಸಿ ವೈಜ್ಞಾನಿಕ ಸಂಶೋಧನೆ ನಿಂತಿದೆ. ಎಂದೇ ಇದು ಮನುಷ್ಯ ವರ್ತನೆಗಳನ್ನು ಕುರಿತು ಕೂಡ ಅಷ್ಟೇ ನಿಜವಾಗಿದೆ. ಪರಿಸ್ಥಿತಿ ಹೀಗಿರುವಾಗ, ಪ್ರಾರ್ಥನೆ ಸಲ್ಲಿಸಿ—ಪರಾತ್ಪರ ವಸ್ತುವೊಂದಕ್ಕೆ ನಮ್ಮ ಇಚ್ಛೆಯನ್ನು ನಿವೇದಿಸಿ—ಘಟನೆಗಳ ಮೇಲೆ ಪ್ರಭಾವಬೀರಬಹುದೆಂಬುದನ್ನು ಒಬ್ಬ ಸಂಶೋಧಕವಿಜ್ಞಾನಿ ಗಂಭೀರವಾಗಿ ಏನೂ ಪರಿಗಣಿಸಲಾರ.

"ಆದರೆ ಈ ನಿಯಮಂಗಳನ್ನು ಕುರಿತ ನಮ್ಮ ವಾಸ್ತವಜ್ಞಾನ ಕೇವಲ ಅಪರಿಪೂರ್ಣ ಮತ್ತು ಆಂಶಿಕ ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಹೀಗಾಗಿ ವಸ್ತುತಃ, ಮೂಲಾಧಾರವಾದ ಸರ್ವಪರಿಗ್ರಾಹಿ ನಿಸರ್ಗ ನಿಯಮಂಗಳ ಅಸ್ತಿತ್ವದ ಬಗೆಗಿನ ವಿಶ್ವಾಸವಾದರೂ ಒಂದು ತರಹದ ಭರವಸೆಯ ಮೇಲೆಯೇ ನೆಲಸಿರುವುದಾಗಿದೆ. ಇಂತಿದ್ದರೂ ವೈಜ್ಞಾನಿಕ ಸಂಶೋಧನೆಗೆ ಈ ತನಕ ಒದಗಿರುವ ಯಶಸ್ಸು ಈ ಭರವಸೆಯನ್ನು ಬಲುಮಟ್ಟಿಗೆ ಸಮರ್ಥಿಸಿದೆ.

"ಇತ್ತ ವಿಜ್ಞಾನದ ಅನ್ವೇಷಣೆಯಲ್ಲಿ ಗಾಢವಾಗಿ ಮಗ್ನನಾಗಿರುವ

ಪ್ರತಿಯೊಬ್ಬನಿಗೂ ವಿಶ್ವದ ನಿಯಮಗಳ ಹಿಂದೆ ಒಂದು ಚೇತನ ಸ್ಪಂದಿಸುತ್ತಿದೆ ಯೆಂಬ ಭಾವ ದೃಢಪಡುತ್ತದೆ. ಅದೆಂಥ ಚೇತನ ? ಮಾನವನದ್ದಕ್ಕಿಂತ ಅದೆಷ್ಟೊ ಅಧಿಕತ್ರಾಣ ಚೇತನ ! ತೀರ ಪರಿಮಿತ ಸಾಮರ್ಥ್ಯವಂತರಾದ ನಾವು ಮನುಷ್ಯರು ಅದರ ಸಾನ್ನಿಧ್ಯದಲ್ಲಿ ವಿನೀತರಾಗುವುದೊಂದೇ ಶರಣು. ಹೀಗೆ ವಿಜ್ಞಾನದ ಅನ್ವೇಷಣೆ ವಿಶಿಷ್ಟ ಬಗೆಯ ಒಂದು ಧಾರ್ಮಿಕ ಭಾವನೆ ಯತ್ತ ನಮ್ಮನ್ನು ಒಯ್ಯುತ್ತದೆ. ಈ ಭಾವನೆ ಮುಗ್ಧ ವ್ಯಕ್ತಿಯೊಬ್ಬನ ಧಾರ್ಮಿಕ ಶ್ರದ್ಧೆಗಿಂತ ಬೇರೆಯೇ ಆದದ್ದು.''

ಮಾನವ ಎರಡು ಬಗೆಯ 'ಬಲ'ಗಳಿಂದ ಪ್ರಭಾವಿತನಾಗಿದ್ದಾನೆ : ನೈಸರ್ಗಿಕ ಬಲಗಳು, ಮಾನವಜನ್ಯ ಬಲಗಳು. ಮೊದಲನೆಯವು ನೈಸರ್ಗಿಕ ನಿಯಮಗಳ ಅನುಸಾರ ವರ್ತಿಸುತ್ತವೆ. ಅವುಗಳ ಮೇಲೆ ಮಾನವನ ಹತೋಟಿ ಅಥವಾ ನಿಯಂತ್ರಣ ಏನೂ ಇಲ್ಲ. ಎರಡನೆಯವು ? ಹೌದು—ಇವನ್ನು ನಿಯಂತ್ರಿಸುವ ನಿಯಮಗಳನ್ನು ನೈಸರ್ಗಿಕ ನಿಯಮಗಳಿಗೆ ಅನುವರ್ತಿಯಾಗಿ ರುವಂತೆ — ಎಂದೂ ವಿರುದ್ಧವಾಗಿರದಂತೆ — ರೂಪಿಸಿಕೊಂಡಾಗ ಮಾತ್ರ ಜೀವನ ಅರ್ಥಪೂರ್ಣವಾಗುತ್ತದೆ. ಇಂಥ ಜೀವನದಲ್ಲಿ 'ಭವಿಷ್ಯವಾಚನ,' 'ಪವಾಡ,' 'ಪರಮನೋವಾಚನ' ಮುಂತಾದ ನೈಸರ್ಗಿಕನಿಯಮವಿರುದ್ಧ ಚಟುವಟಿಕೆಗಳಿಗೆ ಅವಕಾಶವೇ ಇಲ್ಲ.

ದೇವರು, ಪ್ರಾರ್ಥನೆ, ಪೂಜೆ ಮುಂತಾದವು ಕೇವಲ ವ್ಯಕ್ತಿಯ ನಂಬಿಕೆಯ ನೆಲೆಯಲ್ಲಿ ಚಲಾವಣೆಯಲ್ಲಿದ್ದು ಆತನ ಆತ್ಮಸಂಸ್ಕಾರವನ್ನು ಸಾಧಿಸ ಬಲ್ಲ ವೈಯಕ್ತಿಕ ಧಾತುಗಳು ಮಾತ್ರ ಎಂದು ಅಂಗೀಕರಿಸಬಹುದು. ಇವು ಸಾಮಾಜಿಕ ಒಡಕಿಗೆ ಕಾರಣವಾಗತಕ್ಕದ್ದಲ್ಲ. ನಂಬಿದಾತ ನಂಬದಾತನಿಗಿಂತ ಶ್ರೇಷ್ಠನೂ ಅಲ್ಲ, ಕನಿಷ್ಠನೂ ಅಲ್ಲ. ನಂಬಿದಾತನೇ ಇರಲಿ ನಂಬದಾತನೇ ಇರಲಿ ಆತನ ಖಾಸಗಿ ಮತ್ತು ಸಾರ್ವಜನಿಕ ಮುಖಗಳೆರಡರಲ್ಲೂ ಸಾಮರಸ್ಯ ವಿದ್ದು ಆತ ಸಾಮಾಜಿಕವಾಗಿ ಸಂಗತ ಮತ್ತು ಉಪಯುಕ್ತ ಜೀವನ ನಡೆಸು ತ್ತಿರುವನೇ ಎಂಬುದೊಂದರ ಮೇಲೆಯೇ ಆತನ ನಿಜ ಯೋಗ್ಯತೆ ನಿರ್ಣಯ ವಾಗತಕ್ಕದ್ದು.

ಜೀವನವನ್ನು ಪ್ರಾಮಾಣಿಕವಾಗಿ ಸ್ವೀಕರಿಸತಕ್ಕದ್ದು. ನಿಮ್ಮ ಬಗ್ಗೆ ಭರವಸೆಯಿಂದಲೂ ಇತರರ ಬಗ್ಗೆ ವಿಶ್ವಾಸದಿಂದಲೂ ವರ್ತಿಸತಕ್ಕದ್ದು. ಇಲ್ಲಿಯ ಎಲ್ಲ ಸಮಸ್ಯೆಗಳಿಗೂ ಇಲ್ಲಿಯೇ ನೇರ ಪರಿಹಾರಗಳನ್ನು ಅರಸ

ತಕ್ಕದ್ದು. ನೇರ ನಡೆ, ದಿಟ್ಟ ನುಡಿ, ಸ್ವಚ್ಛ ಬಗೆಗಳ ಮುಂದೆ ಮಣಿಯದ ಸಮಸ್ಯೆ ಇಲ್ಲವೇ ಇಲ್ಲ ಎಂದು ಅರಿತು ತದನುಗುಣವಾಗಿ ವರ್ತಿಸತಕ್ಕದ್ದು.

## ಸಮಾರೋಪ

ಭವಿಷ್ಯವಾಚನ ಅಸಾಧ್ಯ. ಇದು ನಿಸರ್ಗನಿಯಮಗಳಿಗೆ ವಿರುದ್ಧವಾದದ್ದು. ಇಲ್ಲಿ ಯಾರಿಗೂ ಎಲ್ಲಿಯೂ ಎಂದಿಗೂ ವಿನಾಯಿತಿ ಇಲ್ಲ. ಗುರುತ್ವಾಕರ್ಷಣಬಲದ ವಿರುದ್ಧ, ಅನ್ಯಸಲಕರಣೆಗಳ ನೆರವಿಲ್ಲದೇ, ನೀರಾವಿಯಂತೆ ಮೇಲೇಳುವುದು ಸಾಧ್ಯವೇ ? ಇದೊಂದು ಕಾಲ್ಪನಿಕ ವಿದ್ಯಮಾನ—ವಾಯುಲಘಿಮಾ ಎಂದು ಹೆಸರು. (ದೇವತೆಗಳಿಗೆ ಈ ಸಾಮರ್ಥ್ಯವಿದೆಯೆಂಬ ಸಂಗತಿ ಅಲ್ಲಾಯಿದ !) ಕಡಲ ನೀರಿನ ಮೇಲೆ ಗಟ್ಟಿ ನೆಲದಲ್ಲಿಯಂತೆ ಹೆಜ್ಜೆ ಹಾಕುತ್ತ ಹೋಗುವುದು ಸಾಧ್ಯವೇ ? ಈ ಗಾಳಿಗೋಪುರಕ್ಕೆ ಜಲಲಘಿಮಾಂದು ಹೆಸರು.

"ನಾನೊಬ್ಬ ಹಠಯೋಗಿ. ದೀರ್ಘಕಾಲ ಕಠಿಣ ತಪಸ್ಸು ಮಾಡಿ ಜಲಲಘಿಮಾ ಸಿದ್ಧಿ ಪಡೆದಿದ್ದೇನೆ. ಈ ವಿದ್ಯೆಯನ್ನು ಪ್ರಯೋಗಿಸಿ ನಾನೀಗ ಗಂಗಾ ಪ್ರವಾಹದ ಮೇಲೆ ನಡೆದು ನಿಮ್ಮಲ್ಲಿಗೆ ಬಂದಿದ್ದೇನೆ." ವಿಜಯಕೇತು ಆತನ ಮುಖದ ಮೇಲೆ ಕೆತ್ತಿದಂತಿತ್ತು.

ಶ್ರೀ ರಾಮಕೃಷ್ಣ ಪರಮಹಂಸರೆಂದರು "ಅಯ್ಯಾ ತಾಪಸ ಶ್ರೇಷ್ಠನೇ ! ನಿನ್ನ ವಿಫಲ ಸಾಹಸಕ್ಕೆ ನಾನು ಅತಿಶಯವಾಗಿ ಮರುಗುತ್ತೇನೆ. ಬಡ ಅಂಬಿಗನೊಬ್ಬನಿಗೆ ಮೂರು ಕಾಸು ಬಿಸಾಡಿದ್ದರೆ ಈ 'ಮಹಾಸಾಹಸ'ವನ್ನು ಅನಾಯಾಸವಾಗಿ ಸಾಧಿಸಬಹುದಾಗಿತ್ತಲ್ಲ !"

ಪರಮಹಂಸವಾಣಿಯಲ್ಲಿ ಅಂತರ್ಗತವಾಗಿರುವ ಸಂದೇಶಗಳು ಎರಡು ! ನಿಸರ್ಗನಿಯಮಗಳಿಗೆ ವ್ಯತಿರಿಕ್ತವಾದ ಯೋಗ ಇಲ್ಲ ; ಆಡು ಮಾಡುವ ಕೆಲಸಕ್ಕೆ ಆನೆ ತರತಕ್ಕದ್ದಲ್ಲ.

ವಾಯುಲಘಿಮಾ, ಜಲಲಘಿಮಾ, ಭವಿಷ್ಯವಾಚನ ಮುಂತಾದವು ಕಲ್ಪನಾಲೋಕಕ್ಕೆ ಸೇರಿದವು, ವಾಸ್ತವ ಪ್ರಪಂಚದವಲ್ಲ. "ನಾನೂ ಭವಿಷ್ಯವಾಚನ ನಂಬುತ್ತೇನೆ. ಫಲಜ್ಯೋತಿಷಿಯ ಜೊತೆ ಸಮಾಲೋಚನೆ ಮಾಡಿದ ಹೊರತು ಮುಂದಿನ ನಿರ್ಧಾರ ತಳೆಯುವುದಿಲ್ಲ" ಎಂಬಾತನ ಮಾತಿನ ಅರ್ಥ ಇದು : "ನಿಸರ್ಗದ ಭವಿಷ್ಯಯೋಜನೆಗಳತ್ತ ನಾನು ಇಣುಕುನೋಟ ಹಾಯಿ

ಸುತ್ತೇನೆ. ಅಲ್ಲಿ ನನಗೆ ಪ್ರತಿಕೂಲವಾದ ಸಂಗತಿಗಳಿದ್ದರೆ ಅವನ್ನು ನಿವಾರಿಸಲು ಪ್ರಯತ್ನಿಸುತ್ತೇನೆ. ನಿವಾರಣೆ ಅಸಾಧ್ಯವಾದರೆ ಅವು ಮುಗಿಯುವ ತನಕ—ಅಂದರೆ ಕೆಟ್ಟ ದಿನಗಳು ಹೋಗಿ ಒಳ್ಳೆಯ ದಿನಗಳು ಬರುವ ತನಕ—ಕಾಯುತ್ತಿರುತ್ತೇನೆ."

ಇಂಥ ಹಾಸ್ಯಾಸ್ಪದ ಧಾಟಿಯಲ್ಲಿ ಚಿಂತಿಸುವವರನ್ನೂ ಇವರ ಬೆಂಬಲಿಗರನ್ನೂ ಮಾನಸಿಕ ಚಿಕಿತ್ಸೆಗೆ ಒಳಪಡಿಸುವುದೊಂದೇ ಸರಿಯಾದ ಮಾರ್ಗ. ಏಕೆಂದರೆ ನಿಸರ್ಗಕ್ಕೆ ಮನವಿಲ್ಲ, ಮಾರ್ಗವಿಲ್ಲ, ಆದ್ದರಿಂದ ಯೋಚನೆಯೂ ಇಲ್ಲ ! ನಿರ್ಜೀವ ನಿರ್ಮನ ನಿರ್ಭಾವ ಭೌತಬಲಗಳ ವ್ಯವಹಾರ ಪ್ರಪಂಚವೇ ನಿಸರ್ಗ. ಇಲ್ಲಿ ಯಾವ ಬಿಡಿ ವ್ಯಕ್ತಿಯೂ ಮುಖ್ಯನಲ್ಲ, ಅಮುಖ್ಯನೂ ಅಲ್ಲ. ನಮಗೆ ನಿಸರ್ಗ ಮುಖ್ಯ. ಏಕೆಂದರೆ ನಾವು ನಿಸರ್ಗದ ಅನಂತಸೂಕ್ಷ್ಮಾಂಶ. ಆದರೆ ನಿಸರ್ಗಕ್ಕೆ ನಾವು ತೀರ ತೀರ ತೀರ ಗೌಣ. ನಾವಿಲ್ಲದಿದ್ದರೂ ನಿಸರ್ಗ ಇದ್ದೇ ಇರುತ್ತದೆ — ಪ್ರಾಯಶಃ ಇನ್ನೂ ಶಾಂತವಾಗಿ ಮಾಲಿನ್ಯರಹಿತವಾಗಿ ಮತ್ತು ನೈಸರ್ಗಿಕವಾಗಿ !

ಗ್ರಹಗತಿಯ ತಿದ್ದುವನೆ ಜೋಯಿಸನು ಜಾತಕದಿ ?
ವಿಹಿತವಾಗಿಹುದದರ ಗತಿ ಸೃಷ್ಟಿ ವಿಧಿಯಿಂ
ಸಹಿಸಿದಲ್ಲದೆ ಮುಗಿಯುದಾವ ದಶೆ ಬಂದೊಡಂ
ಸಹನೆ ವಜ್ರದ ಕವಚ ಮಂಕುತಿಮ್ಮ

"ಇತರರಿಗೆ ಹೇಳುವುದು ಸುಲಭ. ಹಾಗೆ ಬಾಳುವುದು ಕಠಿಣ. ನೀವೇನು ಮಾಡಿದ್ದೀರಿ ?" ಇದು ನಾನು ಮತ್ತೆ ಮತ್ತೆ ಎದುರಿಸುತ್ತಿರುವ ಸಾರ್ವಜನಿಕ ಆಕ್ರೋಶದ ಒಂದು ಸೌಮ್ಯ ಅಭಿವ್ಯಕ್ತಿ. ಈ ಪ್ರಶ್ನೆಗೆ ಸೌಜನ್ಯದ ಹಾಗೂ ಔಚಿತ್ಯದ ಮಿತಿಯೊಳಗೆ ನಾನು ಬರೆಯಬಹುದಾದ ಉತ್ತರವಿಷ್ಟು :

ಮೂಲತಃ ನಾನು ಕೂಡ ಅಂಥ ಪರಂಪರೆಯ ಮುಗ್ಧ ಶಿಶುವಾಗಿಯೇ ಬೆಳೆದವನು. ಆದರೆ ಶಿಕ್ಷಣರಂಗದಲ್ಲಿ ನಾನು ವಿಕಸಿಸಿದಂತೆ ನನ್ನ ಒಂದೊಂದು ನಂಬಿಕೆ ನಡವಳಿಕೆಯನ್ನೂ ಪ್ರಯೋಗದ ಅಥವಾ ವೈಚಾರಿಕ ತಪಾಸಣೆಯ ಒರೆಗಲ್ಲಿಗೆ ಸಹಾನುಭೂತಿಯಿಂದ ತೀಡಲು ಆರಂಭಿಸದೆ. ದೇವರು, ವಿಧಿಗಳು, ಧಾರ್ಮಿಕ ಆಚರಣೆಗಳು, ಶುಭಕಾಲ ಅಶುಭಕಾಲ ಎಂಬ ಭೇದಗಳು, ಪೂಜೆ ಪ್ರಾರ್ಥನೆಗಳು, ಹೋಮಹವನಗಳು ಮುಂತಾದವು ಎರಡು ಪ್ರಧಾನ ಪರೀಕ್ಷೆಗಳಲ್ಲಿ ಉತ್ತೀರ್ಣವಾದ ಹೊರತು ಸ್ವೀಕಾರಾರ್ಹವಲ್ಲ ಎಂಬ ತೀರ್ಮಾನಕ್ಕೆ

ಬಂದು ತದನುಗುಣವಾಗಿ ನನ್ನ ವೈಯಕ್ತಿಕ ಜೀವನವನ್ನು ಮಾರ್ಪಡಿಸ ತೊಡಗಿದ—ನಿಧಾನವಾಗಿ, ಅನುಕಂಪಸಹಿತವಾಗಿ. ಆ ಪರೀಕ್ಷೆಗಳಿವು : ಒಂದು, ಇದು ನೀತಿವಿರುದ್ಧ ಅಲ್ಲವಷ್ಟೆ ? ಎರಡು, ಇದು ಪ್ರೀತಿಪೋಷಕ ಹೌದಷ್ಟೆ ? ಏಕೆಂದರೆ, ಅಂತಿಮವಾಗಿ ವ್ಯಕ್ತಿಯ ಸಾಮಾಜಿಕ, ಸಾಂಸಾರಿಕ ಹಾಗೂ ಮಾನಸಿಕ ಜೀವನ ನಿಂತಿರುವುದು ನೀತಿ ಮತ್ತು ಪ್ರೀತಿ ಎಂಬ ಎರಡೇ ಎರಡು ಭದ್ರ ಶಿಲೆಗಳ ಮೇಲೆ. ನೀತಿರಹಿತ ಜೀವನ ಕೂಪೆಮುರ ಮುರಿದ ಹಡಗು. ಪ್ರೀತಿರಹಿತ ಜೀವನ ಗಾಣದೆತ್ತಿನ ದುಡಿಮೆ. ನೀತಿರಹಿತ ಪ್ರೀತಿ ಧೃತರಾಷ್ಟ್ರನ ಜೀವನಕ್ಕೆ ನಾಂದಿ. ಪ್ರೀತಿರಹಿತ ನೀತಿ ಅಹಲ್ಯೆಗೆ ಶಾಪವಿತ್ತ ಗೌತಮನ ಜೀವನಕ್ಕೆ ನಾಂದಿ. ನೀತಿ- ಪ್ರೀತಿಗಳ ಸಾಮರಸ್ಯವೇ ನಿಜಜೀವನದ ಬುನಾದಿ. ನನ್ನ ಬದುಕಿನ ತಳದಲ್ಲಿ ಈ ಸಾಮರಸ್ಯ ಸಾಧಿಸಲು ಸತತ ಪ್ರಯತ್ನಶೀಲ ನಾಗಿದ್ದೇನೆ.

ಅಸತ್ತಿನಿಂದಾ ಸತ್ತಿನ ಕಡೆಗೆ
ಅಭೂತದಿಂದಾ ಅಪೂರ್ವದೆಡೆಗೆ
ಅಜೀವದಲ್ಲೇ ಜೀವದ ನಡಿಗೆ

ನಡಿಸೌ ಶ್ರೀಮಾತೇ
ನಡಿಸೌ ಶ್ರೀಮಾತೇ

ಕತ್ತಲೆಯಿಂದಾ ಜ್ಯೋತಿಯ ಬದಿಗೆ
ಅಶ್ರದ್ಧೆಯಿಂದಾ ಶ್ರದ್ಧಾನದಿಗೆ
ಅನೈಕ್ಯದಿಂದಾ ಐಕ್ಯದ ತುದಿಗೆ

ನಿಲಿಸೌ ಶ್ರೀಮಾತೇ
ನಿಲಿಸೌ ಶ್ರೀಮಾತೇ

ಅಂಬಿಕಾತನಯದತ್ತ

ಅನುಬಂಧ ೧

# ಭಾಸ್ಕರಾಚಾರ್ಯಪ್ರಣೀತ ಭವಿಷ್ಯವಾಣಿ

ಭಾಗಮಂಡಲದಿಂದ ತಲಕಾವೇರಿಗೆ ನಡೆದು ಬೆಟ್ಟವೇರುವಾಗ ನಡುವೆ ಒಂದೆಡೆ ಬಲಕ್ಕೆ ಕಾಲ್ದಾರಿ ಕವಲೊಡೆಯುತ್ತದೆ. ಈ 'ಅಡ್ಡ ಹಾದಿ'ಯಲ್ಲಿ ಮುನ್ನಡೆದಾಗ ನಮಗೊಂದು ಅದ್ಭುತ ನೈಸರ್ಗಿಕ ಶಿಲ್ಪ ಎದುರಾಗುತ್ತದೆ. ಸ್ಥಳೀಯ ಐತಿಹ್ಯದ ಪ್ರಕಾರ ಪಾಂಡವರು ಅಜ್ಞಾತವಾಸಾವಧಿಯಲ್ಲಿ ತಂಗಿದ್ದ ತಾಣವಿದು, ಭೀಮನಿಗೆ ಮೊಸರಲ್ಲಿ ಸಿಕ್ಕಿದ ಕಲ್ಲನ್ನು ಬದಿಗಿಟ್ಟ, ಅದೇ ಈ ಹೆಬ್ಬಂಡೆ. ಎಂದೇ ಇದರ ಹೆಸರು ಭೀಮನ ಕಲ್ಲು. ದ್ವಾಪರಯುಗದಲ್ಲಿ ನಿಜಕ್ಕೂ ಮನುಷ್ಯರು ಪರ್ವತಗಾತ್ರಿಗಳಾಗಿರಬೇಕು !

ಕೊಡಗಿನ ಕೂಸಾದ ನಾನು, ಪ್ರಾಯಶಃ ಆರರ ಎಳೆ ಹರೆಯದಲ್ಲಿ, ಮೊದಲ ಬಾರಿಗೆ ಈ 'ಪರ್ವತ' ನೋಡಿ, ಇದರ ಹಿನ್ನೆಲೆ ಕತೆ ಕೇಳಿ, ಭೀಮನ ಗಾತ್ರ ಊಹಿಸಿ ಭಯಕಂಪಿತನಾಗಿದ್ದೇನೆ. ಸುತ್ತಲಿನ ಹಸುರು ಕಡಲಿನಲ್ಲಿ ಇದೊಂದು ಒಂಟಿ ದ್ವೀಪ. ಮುಗಿಲೆತ್ತರಕ್ಕೆ ಸೆಟೆದು ನಿಂತಿದೆ. ಇದರಡಿಯಲ್ಲಿ ಆಳವರಿಯಲಾಗದ ಕಗ್ಗತ್ತಲ ಗವಿ—ಘನತಿಮಿರರಾಶಿ, ದಟ್ಟ ಕಾಡು, ಬಾವಲಿಗಳ ಚೀರಾಟ ಹಾರಾಟ, ಮೂಗನ್ನು ಕುಕ್ಕಿ ಇರಿವ ಮುರಿ, ನಡುಹಗಲಲ್ಲೂ ಮುಸುಮುಸುಗುಟ್ಟುವ ಅಂಧಕಾರ. ಇವಕ್ಕೆಲ್ಲ ಸಾಕ್ಷಿಯಾಗಿ ನಿಂತಿರುವ ಆ ಭೂಮಾಶಿಲೆ. ಇಲ್ಲಿ 'ಪೃಥ್ವಿಯ ಪ್ರಥಮ ಪ್ರಭಾತ'ವನ್ನೂ 'ಇತಿಹಾಸದೃಷ್ಟಿಗಸ್ಪಷ್ಟ ಪ್ರಾಚೀನ'ವನ್ನೂ ಕಂಡು ಹೆದರಿದ್ದೇನೆ.

ಮುಂದೆ ನಾನು ಬೆಳೆದಂತೆ ಭೀಮನ ಕಲ್ಲು ಮತ್ತು ಅದರಡಿಯ ಕಪ್ಪಿರುಳು ನನ್ನಲ್ಲಿ ಭಯಬೀರುವುದರ ಬದಲು ಕುತೂಹಲ ಕೆರಳಿಸಲು ಕಾರಣವಾದುವು. ವೇದಕಾಲದ ಋಷಿಪುಂಗವರೂ ಪರಾತ್ಪರವಸ್ತುಚಿಂತಕರೂ ತಪಸ್ಸ್ವಾಧ್ಯಾಯನಿರತರಾಗಿದ್ದ ಪವಿತ್ರ ಪ್ರದೇಶವಿದೆಂದು ಸ್ಥಳಮಾಹಾತ್ಮ್ಯ ವರ್ಣಿಸುತ್ತಿತ್ತು. ಅಂದಮೇಲೆ ಆ ಮಹಾಮಹಿಮರ ಕೃತಿ ಅವಶೇಷಗಳು ಈ ಕತ್ತಲೆಯ ಮೊತ್ತದೊಳಗೆ ಹೆಪ್ಪುಗಟ್ಟಿ ಕುಳಿತಿರಬಹುದಲ್ಲವೇ ?

ಅನ್ವೇಷಕನ ಕುತೂಹಲ ಮತ್ತು ಸಂಶೋಧಕನ ಜಿಜ್ಞಾಸೆ ಈ ವೇಳೆಗೆ ನನ್ನಲ್ಲಿ ಎರಕಗೊಂಡಿದ್ದುವು. ಪ್ರಾಕ್ತನಶಾಸ್ತ್ರದಲ್ಲಿಯೂ ಶಾಸನ ಮತ್ತು ತಾಡಪತ್ರ ವಾಚನದಲ್ಲಿಯೂ ಪ್ರಾವೀಣ್ಯಗಳಿಸಿದ್ದ ನಾನು ತಜ್ಞ ಸಹೋದ್ಯೋಗಿ

ಗಳ ದಂಡಿನ ಸಮೇತ ಆ ಅಲಿಬಾಬನ ಗವಿಯ ಒಳಹೊಕ್ಕೆ : ಉತ್ಖನನ, ಅನ್ವೇಷಣೆ, ಸಂಗ್ರಹಣೆ. ವಿಶ್ಲೇಷಣೆ, ವಾಚನ, ವ್ಯಾಖ್ಯಾನ..........ನಮ್ಮ ಸಾಹಸಗಾಥೆಯ ವಿವರಗಳು ಪ್ರತ್ಯೇಕ ಗ್ರಂಥದಲ್ಲಿ ಪ್ರಕಟವಾಗಲಿವೆ. ಅದರ ಹೆಸರು 'ಭಾಸ್ಕರಾಚಾರ್ಯಪ್ರಣೀತ ಭವಿಷ್ಯವಾಣಿ —ಭೀಮನ ಕಲ್ಲಿನ ಕೆಳಗಡೆ ಕೇಳಿದ ಮುನ್ನುಡಿ!'

ಈ ಸಾಹಸದ ಫಲವಾಗಿ ಲಭಿಸಿದ ಮಾಹಿತಿಗಳು ಅಪಭ್ರಂಶ, ಪ್ರಾಕೃತ ಮುಂತಾದ ಪುರಾತನ ಭಾಷೆಗಳ ಮಿಶ್ರಣದಲ್ಲಿದ್ದುವು. ಇವೆಲ್ಲವನ್ನೂ ವಿದ್ವಾಂಸರ ನೆರವಿನಿಂದ ಕನ್ನಡಭಾಷೆಗೆ ಯಥಾವತ್ತಾಗಿ ತರ್ಜುಮಿಸಿದ್ದಾಯಿತು. ನಾಲ್ಕು ಸಾಲುಗಳ ೯೩೭ ಶ್ಲೋಕಗಳು ದೊರೆತುವು. ದೊರೆಯದಿದ್ದವು ಎಷ್ಟೋ ಸದ್ಯ ತಿಳಿಯದು. ಈ ದಿಶೆಯಲ್ಲಿ ಅನ್ವೇಷಣೆ ಮತ್ತು ಸಂಶೋಧನೆ ಮುಂದುವರಿದಿವೆ. ಲಭ್ಯ ದತ್ತಾಂಶಗಳಿಂದ ಅನುಗತವಾದ ಕೆಲವು ಮುಖ್ಯ ಸಂಗತಿಗಳಿವು.

ಭಾಸ್ಕರಾಚಾರ್ಯನೆಂಬ ಕಾಶ್ಮೀರೀ ಬ್ರಾಹ್ಮಣ ಪಂಡಿತ (ಕ್ರಿಶಸು ೪ನೆಯ ಶತಮಾನ) ದಕ್ಷಿಣಾಭಿಮುಖವಾಗಿ ಪಯಣಿಸಿದ. ತನ್ನ ಜೀವನದ ಕೊನೆಯ ದಿನಗಳನ್ನು ಈ ಭೀಮನ ಕಲ್ಲಿನಡಿಯ ಪಾವನ ಏಕಾಂತದಲ್ಲಿ ಕಳೆದ, ಇವನೊಬ್ಬ ಅನುಭಾವಿ, ದೈವಿಕ ಸ್ಫೂರ್ತಿದೀಪ್ತ ಮತ್ತು ತ್ರಿಕಾಲಜ್ಞಾನಿ. ಆದರೆ ಇವನ ದಿಟ್ಟ ನಡೆ ಮತ್ತು ನೇರನುಡಿ ಜನರಿಗೆ, ಅಲ್ಲಿಯೂ ಪರಪೀಡಕರಿಗೆ, ಹಿಡಿಸಲಿಲ್ಲ. "ಹಾಳಾಗಬೇಡ. ಪ್ರಾಮಾಣಿಕನಾಗಿಯೂ ಆರೋಗ್ಯವಂತನಾಗಿಯೂ ಬಾಳಲು ಪ್ರಯತ್ನಿಸು" ಎಂದು ಉಪದೇಶಿಸುತ್ತಿದ್ದ. ಅಕಾಲದಲ್ಲಿ ಅಯಾಚಿತವಾಗಿ ಅನರ್ಹರಿಗೆ ಅರುಹಿದ ಅಪ್ರಿಯ ಸತ್ಯ ಅವರಿಗೆ ಪಥ್ಯವಾದೀತೇ ? ಭಯಗ್ರಸ್ತ ಮಂದಿ ಇವನನ್ನು ಎಲ್ಲಿಯೂ ನೆಲೆಯೂರಲು ಬಿಡಲಿಲ್ಲ—ಬೆನ್ನಟ್ಟಿ ಬೆರಸಿಯೇ ಬಿಟ್ಟರು.

"ಇಂದಿನ ಮಂದಿಗೆ ನನ್ನ ನುಡಿ ಹಿಡಿಸದಿರಬಹುದು. ಆದರೆ ಮುಂದೊಂದು ದಿನ ಇದನ್ನು ಗ್ರಹಿಸಿ ತಮ್ಮ ಬಾಳನ್ನು ಸುಖಮಯವಾಗಿ ಮಾರ್ಪಡಿಸಿಕೊಳ್ಳಬಲ್ಲ ಜನ ಬಂದೇ ಬರುತ್ತಾರೆ. ಅವರಿಗಾಗಿ ನಾನಿದನ್ನು ಬರೆಯುತ್ತಿದ್ದೇನೆ."

ವಿಶಿಷ್ಟ ಗುಪ್ತ ಅಥವಾ ಪ್ರತೀಕ ಭಾಷೆಯಲ್ಲಿ ನಿರೂಪಿತವಾಗಿದ್ದ ಆ ಚೌಪದಿಗಳನ್ನು ಭಾಷಾಪರಿಣತರು, ಇತಿಹಾಸವಿದರು, ಮನೋವಿಜ್ಞಾನಿಗಳು, ಆಯುರ್ವೇದ ಪಂಡಿತರು, ವೇದಾಂತಶಾಸ್ತ್ರಜ್ಞರು ಮೊದಲಾದ ವಿದ್ವಾಂಸರ

ನೆರವು ಪಡೆದು ಸಾಧ್ಯವಾಗುವಷ್ಟು ಸಮರ್ಪಕವಾಗಿ ಆಧುನಿಕ ಕನ್ನಡಕ್ಕೆ ಅನು ವಾದಿಸಿದೆ.

ಭಾಸ್ಕರಾಚಾರ್ಯ ಅದರಲ್ಲಿ ಆರ್ಯಾವರ್ತದ ಇತಿಹಾಸ. ಭರತಖಂಡದ ಭವಿಷ್ಯ ಮತ್ತು ಸಮಗ್ರವಾಗಿ. ಮನುಕುಲದ ಪೂರ್ವೋತ್ತರ ಎಲ್ಲವನ್ನೂ ಬರೆದಿದ್ದ— ವಿಜ್ಞಾನಿಯ ನಿಸ್ಪೃಷ್ಟತೆಯಿಂದ ಮತ್ತು ಇತಿಹಾಸಕಾರನ ನಿರ್ಲಿ ಪ್ತತೆಯಿಂದ. ಸಾರಿಗೆ, ಸಂಪರ್ಕ ಮತ್ತು ದೂರಸಂವಹನ ಪ್ರಾಥಮಿಕ ಮಟ್ಟ ಕ್ಕಿಂತಲೂ ತೀರ ಕೆಳಗಿದ್ದ ಆ ದಿನಗಳಂದು ಆತ ಸಂಜಯದೃಷ್ಟಿಯಿಂದ ಗತ ಕಾಲ ನೋಡಿ ಮುದ್ರಿಸಿದಂತಿದೆ ಈ ನಿರೂಪಣೆ.

ಇದರಲ್ಲಿ ಪುನರಾವರ್ತಿಸುವ ಪಲ್ಲವಿ ಒಂದೇ : "ಮನುಕುಲದ ಹಿತವೊಂದೇ ನನ್ನ ಉದ್ದೇಶ. ಭೂತಕಾಲ ನೋಡಿ ಪಾಠ ಕಲಿತು ವರ್ತಮಾನದಲ್ಲಿ ಚೆನ್ನಾಗಿ ಬಾಳಿ. ಆದರೆ ಭವಿಷ್ಯ ಪ್ರವೃತ್ತಿಗಳನ್ನು ಅಲಕ್ಷಿಸದಿರಿ. ನಾನು ಭವಿಷ್ಯವನ್ನು ಕಾಣುತ್ತಿರುವೆನಾದರೂ ತದ್ವತ್ತಾಗಿ ಅದನ್ನಿಲ್ಲಿ ದಾಖಲಿಸಿಲ್ಲ. ಕಾರಣ : ವ್ಯಕ್ತಿ ಗಳು ಪ್ರಯತ್ನಚ್ಯುತರಾಗತಕ್ಕದ್ದಲ್ಲ ಮತ್ತು ಕರ್ತವ್ಯಭ್ರಷ್ಟರಾಗತಕ್ಕದ್ದಲ್ಲ."

ಭಾಸ್ಕರಾಚಾರ್ಯನ ಅನಂತರದ—ಅಂದರೆ ಆತನ ಭವಿಷ್ಯದ—ದಿನಗಳ ಬಗ್ಗೆ ತಿಳಿಯಲು ಪ್ರಯತ್ನಿಸಿದೆವು. ಆ ಒಗಟುನುಡಿಗಳನ್ನು ಬಿಡಿಸಿ ವ್ಯಾಖ್ಯಾ ನಿಸಲು ತೊಡಗಿದೆವು. ಪರಿಸ್ಥಿತಿ ಸ್ಪಷ್ಟವಾದಂತೆ ಮತ್ತು ವಾಸ್ತವತೆಯೊಂದಿಗೆ ಏರಕಗೊಂಡಂತೆ ನಮಗೆ ಹಠಾತ್ ವಿಶ್ವರೂಪದರ್ಶನವಾದ ಅನುಭವವಾಗಿ ಸ್ಮೃತಿವಿಭ್ರಮ ಉಂಟಾಯಿತು : ಅಕಾಲಿಕ ಸತ್ಯಪ್ರದರ್ಶನ ದುರಂತಕ್ಕೆ ಹೇತು. ಸಾರಾಂಶ ನೋಡಿ :

"ಬೌದ್ಧರ ಮೂಲೋತ್ಪಾಟನೆಯೊಂದಿಗೆ ಭಾರತದ ಸಾಂಸ್ಕೃತಿಕ ಪತ ನಾರಂಭ. ಪಡುವಣ ಬೆಟ್ಟಸಾಲು ದಾಟಿ ಮ್ಲೇಚ್ಛರ ಆಕ್ರಮಣ. ಇತ್ತ ಪಶ್ಚಿಮ ಸಮುದ್ರದ ಮೂಲಕ ಬಿಳಿತೊಗಲಿಗಳ ಆಗಮನ. ೧೯ನೆಯ ಶತ ಮಾನದಲ್ಲಿ ಭಾರತದ ಸ್ವಾತಂತ್ರ್ಯಾಪಹರಣ. ಇಡೀ ದೇಶವೇ ಬಿಳಿಯರ ಹಿಡಿತದಲ್ಲಿಯ ತುರಂಗ. ಆದರೆ ಆಗಲೇ ಹೋರಾಟದ ಅಂಕುರಾರ್ಪಣೆ. ೨೦ನೆಯ ಶತಮಾನದ ಪ್ರಥಮಾರ್ಧದಲ್ಲಿ ಸಂಭವಿಸಲಿರುವ ಜಾಗತಿಕ ಯುದ್ಧ ವಿಪ್ಲವಗಳ ಕಾರಣವಾಗಿ ಭಾರತಕ್ಕೆ ಸ್ವಾತಂತ್ರ್ಯ ಪ್ರಾಪ್ತಿ. ಆದರೆ ಈ ಸನಾ ತನ ಖಂಡದ ಅಖಂಡತೆ ನಾಶ." ಜಿನ್ನಾ, ಗಾಂಧಿ, ಮಾವೊ. ಹಿಟ್ಲರ್, ಚರ್ಚಿಲ್, ಸ್ಟಾಲಿನ್, ರೂಸ್ವೆಲ್ಟ್ ಮೊದಲಾದ ಪ್ರಪಂಚ ಧುರೀಣರ ಹೆಸರು ಗಳು ಈ ಪ್ರಾಚೀನ ದಾಖಲೆಯಲ್ಲಿ ಸಾಂದರ್ಭಿಕವಾಗಿ ಬಂದಿರುವುದು ಗಮನಾರ್ಹ.

ಹಾಗಾದರೆ ೨೦ನೆಯ ಶತಮಾನಕ್ಕುರಿತಂತೆ ಆತ ಏನು ಬರೆದಿದ್ದಾನೆ ? "೨೧ನೆಯ ಶತಮಾನದ ಪೂರ್ವಾರ್ಧದಲ್ಲಿ ಮನುಕುಲ ಒಹಂತೇಶ ನಶಿಸಿಯೇ ಹೋಗಲಿದೆ. ಆಗ ಸಂಭವಿಸಲಿರುವ ಪ್ರಪಂಚಯುದ್ಧದಲ್ಲಿ ಸೂರ್ಯಸದೃಶ ಅಗ್ನ್ಯಾಯುಧಗಳು ಧಾರಾಳವಾಗಿ ಬಳಸಲ್ಪಟ್ಟು ಇಡೀ ಭೂಮಿ ದಾವಾನಲ ಮಯವಾಗುತ್ತದೆ……"

ಸಾಕ್ಷಾತ್ ಐನ್‌ಸ್ಟೈನ್ ಕೂಡ ಕಾರ್ಯಸಾಧ್ಯವಾದೀತೆಂದು ಊಹಿಸಿರದಿದ್ದ ಪರಮಾಣು (ಅಥವಾ ಬೈಜಿಕ) ಬಾಂಬ್‌ಗಳ ಚಂಡಾಟವನ್ನು ಭಾಸ್ಕರಾಚಾರ್ಯ ಮುಂಗಂಡು ವಿವರಿಸಿದ್ದಾನೆ !

* * *

ಈ ಮೇಲಿನ 'ಸತ್ಯಸ್ಯ ಸತ್ಯ ಕಥನ' ಕುರಿತಂತೆ ನಿಮ್ಮ ಪ್ರತಿಕ್ರಿಯೆ ಏನೆಂದು ನನಗೆ ಗೊತ್ತಿದೆ.

ನೀವು : "ಈ ಸಂಶೋಧನಗ್ರಂಥ ಪ್ರಕಟವಾಗಿದೆಯೇ ?"

ನಾನು : "ನಾನು ಪ್ರಕಟಿಸಿಲ್ಲ. ಆದರೆ ಪ್ರಕಟವಾಗಿದೆ."

"ಅಂದರೇನರ್ಥ ?"

"ನಿಮಗೆ ಬೇಕಾದಂತೆ !"

"ಇದು ನಿಜವೇ ? ಬುರುಡೆಯೇ ?"

"ನಿಮ್ಮ ಅರಿವಿಗೆ ಅನುಗುಣವಾಗಿ ನೀವು ಯಾವುದೇ ತೀರ್ಮಾನ ತಳೆಯಬಹುದು !"

"ಹಾಗಾದರೆ ಇದು ಹಸಿ ಸುಳ್ಳು. ವಿಜ್ಞಾನ ಓದಿ ಬೋಧಿಸುತ್ತಿರುವ ಮತ್ತು ಕುರುಡು ನಂಬಿಕೆಗಳನ್ನು ವಿರೋಧಿಸುತ್ತಿರುವ ನೀವು ಕೂಡ ಇಂಥ ಪೊಳ್ಳನ್ನು ಚಲಾವಣೆಗೆ ತರುತ್ತೀರೆಂದು ನಾನು ಭಾವಿಸಿರಲಿಲ್ಲ ?"

ಆಧುನಿಕ ವಿಜ್ಞಾನ ಮತ್ತು ತಂತ್ರವಿದ್ಯೆಯಲ್ಲಿ ಉನ್ನತ ಶಿಕ್ಷಣ ಪಡೆದು ಸಂಶೋಧಕವಿಜ್ಞಾನಿಯಾಗಿರುವ ಮಿತ್ರರೊಬ್ಬರು ಇಂಗ್ಲಿಷಿನಲ್ಲಿ ಪ್ರಕಟವಾಗಿದ್ದ ಒಂದು ಪುಸ್ತಕವನ್ನು ನನಗೆ ಉಡುಗೊರೆಯಾಗಿ ನೀಡಿದರು. ಅದು ಮೊದಲಬಾರಿಗೆ ಪ್ರಕಟವಾದದ್ದು ೧೯೭೩ರಲ್ಲಿ. ನನಗೆ ಅವರು ಕೊಟ್ಟದ್ದು ೧೯೮೯ರ ಆವೃತ್ತಿ. ಈ ಅವಧಿಯಲ್ಲಿ ಅದು ೨೧ ಸಲ ಪುನರ್ಮುದ್ರಣ ಕಂಡಿದೆ. ಹಲವು ಲಕ್ಷ ಪ್ರತಿಗಳು ಇಂಗ್ಲಿಷ್ ಭಾಷೆಯೊಂದರಲ್ಲೇ ಮಾರಾಟ

ವಾಗಿವೆ. ಇನ್ನು ಅನುವಾದಗಳು, ಧ್ವನಿಮುದ್ರಣಗಳು, ವೀಡಿಯೊ ಕ್ಯಾಸೆಟ್ಟು ಗಳು ಎಷ್ಟೋ—ಊಹಿಸಲಾರೆ. ೫೦೦ ಪುಟಗಳಿಗೂ ಜಾಸ್ತಿ ಇರುವ ಈ ಪುಸ್ತಕದ ಪೀಠಿಕೆಯಲ್ಲಿ ಹೀಗೆ ವಿವರಿಸಿದೆ :

"ಪ್ರಾವೆನ್ಸ್ ಎಂಬಲ್ಲಿ ಆತ ಜನಿಸಿದ (೧೫೦೩). ತೀರ ಎಳವೆಯಲ್ಲೇ ಫಲಜ್ಯೋತಿಷ್ಯ ಕುರಿತು ಅನನ್ಯಾಸಕ್ತಿ ಪ್ರದರ್ಶಿಸಿದ. ವೈದ್ಯವಿಜ್ಞಾನ ಓದಿದ. ಆಗ ದಕ್ಷಿಣ ಫ್ರಾನ್ಸ್ ವಲಯದಲ್ಲಿ ಪ್ಲೇಗ್ ಬೇನೆ ಪಿಡುಗಾಗಿ ಕಾಡುತ್ತಿತ್ತು. ಶಕ್ತಿಮೀರಿ ರೋಗಿಗಳಿಗೆ ಔಷಧೋಪಚಾರ ನೀಡಿ ಶುಶ್ರೂಷೆ ಮಾಡಿದ. ಇನ್ನೂ ಯುವಕನಾಗಿದ್ದಾಗಲೇ ಆತನ ಭವಿಷ್ಯವಾಚನಸಾಮರ್ಥ್ಯ ಕಂಡು ಬಂದಿತು. ೧೫೫೧ರಿಂದ ಮುಂದಕ್ಕೆ ಆತ ಪ್ರತಿವರ್ಷವೂ ಪಂಚಾಂಗ ಪ್ರಕಟಿಸ ತೊಡಗಿದ. ೧೫೫೫ರ ವೇಳೆಗೆ 'ಭವಿಷ್ಯ ವಾಣಿ' ಗ್ರಂಥದ ಮೊದಲ ಭಾಗ ಪೂರ್ತಿಗೊಳಿಸಿದ. ಆತನ ಕಾಲದಿಂದ ತೊಡಗಿ ಪ್ರಪಂಚಾಂತ್ಯದ ತನಕ ಸಂಭ ವಿಸಲಿದ್ದ ಘಟನೆಗಳನ್ನು ಅದರಲ್ಲಿ ಕಣಿನುಡಿದಿದ್ದ.

"ಆದರೆ ಜನ ತನ್ನನ್ನು ಮಂತ್ರವಾದಿ, ಮಾಟಗಾರ ಎಂಬುದಾಗಿ ಪೀಡಿ ಸಿಯಾರೆಂದು ಆತಂಕಗೊಂಡು ಈ ಭವಿಷ್ಯವಾಣಿಯ ಕಾಲಶ್ರೇಣಿಯನ್ನು ಬೇಕೆಂದೇ ಹಿಂದು ಮುಂದು ಮಾಡಿ ಗೊಂದಲ ತಂದಿರುವುದಾಗಿ ಹೇಳಿದ್ದಾನೆ. ಪರಿಣತರಲ್ಲದವರಿಗೆ ತನ್ನ ನುಡಿ ಅರ್ಥವಾಗಬಾರದೆಂಬುದು ಉದ್ದೇಶ. ಆತನ ಕೀರ್ತಿ ಅತಿ ಶೀಘ್ರವಾಗಿ ಪಸರಿಸಿತು. ಮೆಡಿಸಿಯ ಕ್ಯಾಥರೀನ್ ರಾಣಿ ತನ್ನ ಏಳು ಮಕ್ಕಳ ಜಾತಕ ತಯಾರಿಸಬೇಕೆಂದು ಆತನಿಗೆ ನಿರೂಪವಿತ್ತಳು. ಆದರೆ ಇವರ ಜೀವನದುರಂತಗಳನ್ನು ಆ ಮೊದಲೇ ಆತ 'ಭವಿಷ್ಯವಾಣಿ'ಗಳಲ್ಲಿ ದಾಖಲಿಸಿದ್ದುದರಿಂದ ಈ ಜಾತಕಲೇಖನ ಆತನಿಗೆ ತುಂಬ ಮುಜಗರದ ಸಂಗತಿ ಆಯಿತು."

೧೬ನೆಯ ಶತಮಾನದ ಈ ಫಲಜ್ಯೋತಿಷಿ ಮತ್ತು ದ್ರಷ್ಟಾರ ೨೦ನೆಯ ಶತಮಾನದ ವೈಶಿಷ್ಟ್ಯಗಳಾದ ವಾಯುಯಾನ, ಎರಡನೆಯ ಮಹಾಯುದ್ಧ, ಅಧ್ಯಕ್ಷ ಕೆನಡಿ ಹತ್ಯೆ, ಅಯಾತೊಲ್ಲಾ ಖೊಮೇನಿಯ ಅಧಿಕಾರಾರೋಹಣ ಮುಂತಾದವನ್ನು ಮುನ್ನುಡಿದಿದ್ದಾನೆ.

ಕೆನೆಡಿ ಹತ್ಯೆ ಕುರಿತ 'ಭವಿಷ್ಯವಾಣಿ' ಹೀಗಿದೆ The great man be struck down in the day by a thunder bolt. An evil deed, foretold by the bearer of a petition......

(Century I, quatrain 26) "ಹಠಾತ್ ಸಿಡಿಲ ಹೊಡೆತ ಆ ಮಹಾ ಪುರುಷನ ಅಂತ್ಯಕ್ಕೆ ಕಾರಣವಾಗುತ್ತದೆ. ಅರ್ಜಿದಾರನೊಬ್ಬ ಈ ಹೇಯ ಕೃತ್ಯದ ಬಗ್ಗೆ ಮೊದಲೇ ಎಚ್ಚರಿಕೆ ನೀಡಿದ್ದ......"

ಈ ನಿಗೂಢಾಸ್ಪಷ್ಟ ನಿರೂಪಣೆಯನ್ನು ಕೆನೆಡಿ ಕೊಲೆಯೊಂದಕ್ಕೇ ಏಕೆ, ರಾಜೀವ ಗಾಂಧಿಯವರ (ಅಥವಾ ಇನ್ನೂ ಹಿಂದೆ ಹೋಗಿ ಇಂದಿರಾಗಾಂಧಿಯವರ) ಹತ್ಯೆಗೆ ಕೂಡ 'ಸಮರ್ಪಕ'ವಾಗಿ ಅನ್ವಯಿಸಬಹುದು. ಜೂಲಿಯಸ್ ಸೀಸರನ ದುರಂತವನ್ನು ಸಹ ಇದು ಪ್ರತೀಕಿಸುತ್ತದೆ.

ಅಂದರೇನಾಯಿತು ? ಈ 'ಜಗತ್ಪ್ರಸಿದ್ಧ' ಭವಿಷ್ಯವಾಚಕ ಪ್ರವಾದಿ ಏನು ಬರೆದಿದ್ದಾನೋ ಬರೆದಿಲ್ಲವೋ ಅದು ಮುಖ್ಯವಲ್ಲ, ವ್ಯಾಖ್ಯಾನಕಾರನ ಕಲ್ಪನೆ, ಊಹೆ ಮತ್ತು ವಾಕ್ಚಾತುರ್ಯ ಇಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಲಂಗು ಲಗಾಮಿಲ್ಲದ ಕಲ್ಪನೆಗೆ ಸಾಧ್ಯವಲ್ಲದ್ದು ಏನಿದೆ? ರಾಜನ ಮರಣಕ್ಕೂ ಧೂಮಕೇತುದರ್ಶನಕ್ಕೂ 'ನಿಕಟ ಸಂಬಂಧ' ಏರ್ಪಟ್ಟಿರುವುದು ಹೀಗೆ !

ಜಗತ್ಪ್ರಸಿದ್ಧವೂ ಪ್ರಪಂಚವನ್ನು ತಲ್ಲಣಗೊಳಿಸಿದುದೂ ಆದ ಈ ಉದ್ಗ್ರಂಥ ಯಾವುದು ಗೊತ್ತೇ? *The Prophecies of Nostradamus*. ಇದೊಂದು ಸಾಹಿತ್ಯಕೃತಿ. ಸ್ವಂತಾನುಭವವನ್ನು ಯುಕ್ತ ರೂಪಕೋಪಮೆ ಸಹಿತ ನಿರೂಪಿಸಿರುವ ಸೃಜನಶೀಲರಚನೆ. ಅನೇಕ ಕಡೆಗಳಲ್ಲಿ ಹೇಳಿಕೆಗಳು ಅಸ್ಪಷ್ಟ, ವಿರೋಧಾಭಾಸಯುಕ್ತ ಮತ್ತು ಅರ್ಥಹೀನವಾಗಿವೆ. ಏನೇ ಇರಲಿ, ನಾಸ್ಟ್ರಡಾಮಸನ ಚೌಪದಿಗಳು ಸ್ವತಃ ಅವನವೇ ? ಅಂಥವನೊಬ್ಬ ಬದುಕಿದ್ದುದು ನಿಜವೇ ? ತದನಂತರದವರು ತಮ್ಮ ಕಲ್ಪನಾವೈಖರಿಯಿಂದ ಅತನನ್ನೂ ಆತನ ವಾಣಿಗಳನ್ನೂ ಸೃಷ್ಟಿಸಿದ್ದಾಗಿರಲಾರದೇ ? ಇವೇ ಮುಂತಾದ ಪ್ರಶ್ನೆಗಳಿಗೆ ಉತ್ತರಗಳಿಲ್ಲ. ಈಗ ನಿಮಗೆ ಖಾತ್ರಿ ಆಗಿರಬೇಕು ಭಾಸ್ಕರಾಚಾರ್ಯ ನನ್ನ ಕಲ್ಪನೆಯ ಶಿಶು ಎಂಬ ಸಂಗತಿ. ನನ್ನ ತುಸು ಅವಿನಯವನ್ನು ನೀವು ಕ್ಷಮಿಸಬೇಕು. ಇಂಗ್ಲಿಷಿನಲ್ಲಿ ಲಕ್ಷಾಂತರ ಪ್ರತಿಗಳು ಮಾರಾಟವಾಗಿ 'ವಿಜ್ಞಾನಸಂಪನ್ನ'ರನ್ನು ಕೂಡ ಮರುಳುಮಾಡಿರುವ ನಾಸ್ಟ್ರಡಾಮಸ್ ಹೆಸರಿನ ಘೋರ ವಂಚನೆಯನ್ನು ಬೇರಾವ ತೆರನಾಗಿ ಖಂಡಿಸೋಣ ?

ಗಣಿತನಿಶಿತಮತಿ ವಿಚಾರವಾದಿ ಡಾ. ಎಸ್. ಬಾಲಚಂದ್ರರಾಯರು *Nostradamus—The Interpreters' Prophet* (ವ್ಯಾಖ್ಯಾನಕಾರರ ಪ್ರವಾದಿ ನಾಸ್ಟ್ರಡಾಮಸ್) ಎಂಬ ವಿದ್ವತ್ಪೂರ್ಣ ವಿಮರ್ಶೆ ಬರೆದಿದ್ದಾರೆ.

ಇದರ ಆರಂಭದಲ್ಲಿ ಅವರು ನಾಸ್ಟ್ರಡಾಮಸನ ಒಂದು ಚೌಪದಿ ಉಲ್ಲೇಖಿಸಿದ್ದಾರೆ (ಶತಕ ೬, ಚೌಪದಿ ೧೦೦) :

May those who read this verse contemplate it deeply
May the profane end ignorant mob stay away
May all astrologers, fools and barbarians keep off
He who does otherwise, let him be priest to the rite

*Century vi quatrain* 100

ಈ ಪದ್ಯದೋದುಂಗರು ಅತಿಗಹನ ಚಿಂತನೆಯು ಮಾಡುವಂತಾಗಲಿ
ಅಪವಿತ್ರ ಅಜ್ಞಾನಿ ಜನಮಂದಿ ಇದರಿಂದ ದೂರವಿರುವಂತಾಗಲಿ
ಫಲಜ್ಯೋತಿಷಿ, ಮೂರ್ಖ, ಅನಾಗರಿಕರೆಲ್ಲರೂ ಹೊರಗುಳಿಯುವಂತಾಗಲಿ
ಇದಕ್ಕೆದುರು ನಡೆವಾತ ಶಾಸ್ತ್ರೋಕ್ತ ಕರ್ಮದ ಹೋತಾರನಾಗಲಿ

ನಾಸ್ಟ್ರಡಾಮಸನ ಈ ಆಶಯ ಫಲಜ್ಯೋತಿಷಿಗಳಿಗೆ ಖಂಡಿತವಾಗಿಯೂ ಅಪ್ಯಾಯಮಾನವಲ್ಲ. ಈತ ಫಲಜ್ಯೋತಿಷಿ ಅಲ್ಲ, ಆ ವಂಚಕಚಮತ್ಕಾರದ ಬಗ್ಗೆ ತಿರಸ್ಕಾರ ತಳೆದಿದ್ದ ಎಂಬುದು ಸ್ಪಷ್ಟ. ಇಂತಿದ್ದರೂ ಇಂಗ್ಲಿಷಿನಲ್ಲಿ ಎರಿಕಾ ಚೀತಮ್ ನೀಡಿರುವ ವ್ಯಾಖ್ಯಾನ ಹೇಗಿದೆ ಗೊತ್ತೇ ? "ನಾಸ್ಟ್ರಡಾಮಸ್ ಹೀನೈಸಿರುವವರ ಸಾಲಿನಲ್ಲಿ ಫಲಜ್ಯೋತಿಷಿಗಳನ್ನೂ ಸೇರಿಸಿರುವುದೇಕೆ ? ಅಧಿಕಾರಿಗಳನ್ನು ಮೋಸಗೊಳಿಸಲು ಆತ ಎಸೆದಿರುವ ಇನ್ನೂ ಒಂದು ಕಪಟ ಜಾಲ ಇದಾಗಿರಬಹುದೇ ?" ಇಲ್ಲಿ ಪ್ರಕಟವಾಗುವ ವ್ಯಾಖ್ಯಾನಕಾರರ ಬೌದ್ಧಿಕ ದಾಸ್ಯ ನಮ್ಮಲ್ಲಿ ಮರುಕ ಮೂಡಿಸುತ್ತದೆ.

ಇಲ್ಲಿಯ ಸೂತ್ರವಿದು : ಮೊದಲು, ನಾಸ್ಟ್ರಡಾಮಸನನ್ನು ಪ್ರವಾದಿ ಎಂದು ಪೂರ್ತಿ ಅಂಗೀಕರಿಸಿ ; ಬಳಿಕ, ಆತನ ಹೇಳಿಕೆಗಳಲ್ಲಿ ಭೂತವರ್ತಮಾನಗಳನ್ನು ಕಾಣಲು ಕಲ್ಪನೆಯನ್ನು ಲಂಗುಲಗಾಮಿಲ್ಲದೆ ಹರಿಯಗೊಡಿ; ಕೊನೆಗೆ, ಈ ಮಂಚಿಕೆಯಲ್ಲಿ ನಿಂತು ಭವಿಷ್ಯದ ಅಜ್ಞಾತಕ್ಕೆ ನೆಗೆದೇಬಿಡಿ— "ಆಚೆಗೆ ಚಾಚಿದೆ ತನ್ನಯ ಚುಂಚ." ಯಾವುದೇ ನೈಜ ಸಾಹಿತ್ಯಕೃತಿ ಕುರಿತಂತೆಯೂ— ಸರ್ವಜ್ಞನ ವಚನಗಳು,ಹರಿದಾಸರ ಕೃತಿಗಳು, ಮಂಕುತಿಮ್ಮನ ಕಗ್ಗ, ಸೋಮೇಶ್ವರ ಶತಕ ಇತ್ಯಾದಿ—ನೀವು ಈ ಪ್ರಯೋಗ ಮಾಡಿ ಕೃತಕೃತ್ಯರಾಗಬಹುದು. ನಾಸ್ಟ್ರಡಾಮಸನನ್ನು ಭಾರತೀಯ ದೃಷ್ಟಿಯಿಂದಲೂ ವ್ಯಾಖ್ಯಾನಿಸಲಾಗಿದೆ

ಯಂತೆ—ಅನಿಷ್ಟಕ್ಕೆ ಅಮಂಗಳದ ವಕಾಲತ್ತು. ಹುಚ್ಚರ ಸಂತೆಯಲ್ಲಿ ವಿವೇಕದ ಚಿಂತೆ ಏಕೆ ?

ಬಾಲಚಂದ್ರರಾಯರು ತಮ್ಮ ಲೇಖನವನ್ನು ಸಮಾರೋಪಿಸುತ್ತ ಬರೆದಿರುವ ಮಾತು ಗಮನಾರ್ಹವಾಗಿದೆ : "ನಾಸ್ತ್ರಡಾಮಸ್ ಎಂದೂ ನಿರೀಕ್ಷಿಸಿ ಕೂಡ ಇರದಿದ್ದ ಅರ್ಥಗಳನ್ನು ಆತನ ಕಿರುಚೌಪದಿಗಳಿಂದ ಹಿಂಜಿ ತಿರುಚಿ ಹಿಂಡಿ ಹೊರತೆಗೆದುದರ ಬಗ್ಗೆ ಆ 'ಪ್ರವಾದಿ'ಯ ಪ್ರತಿಕ್ರಿಯೆ ಏನಿರ ಬಹುದೆಂಬುದೊಂದು ಕುತೂಹಲಕಾರಿ ಊಹೆ. ಅಮೆರಿಕದಲ್ಲಿರುವ ಪ್ರಸಿದ್ಧ ವಿಚಾರವಾದಿ ಜೇಮ್ಸ್‌ರ್‍ಯಾಂಡಿ ನೀಡಿರುವ ವಿವರಣೆ ಇದು : ತನ್ನ ಅಸ್ಪಷ್ಟ ಕಗ್ಗಗಳನ್ನು ಅತಿಗಹನ ಭವಿಷ್ಯವಾಣಿಗಳಾಗಿ ಪರಿವರ್ತಿಸುವಲ್ಲಿ ಈ ನವೀನ ಅನುಯಾಯಿಗಳು ಅನುಭವಿಸುವ ಸೆಡವು ಸೆಳವುಗಳನ್ನು ನೋಡುತ್ತ ಆತ ಕಿಲಕಿಲನೆ ನಗುತ್ತಿರಬಹುದು !"

ಈ ವ್ಯಾಖ್ಯಾನ ಚಾತುರ್ಯವೊಂದು ಮಾನಸಿಕ ವ್ಯಾಧಿ—ಅದೂ ಈ ಎಲೆಕ್ಟ್ರಾನಿಕ್ ಪ್ರಪಂಚದ ಪ್ರಚಾರಯುಗದಲ್ಲಿ ಸಾರ್ವಜನಿಕ ಪಿಡುಗು, ಸಾಮೂಹಿಕ ಸನ್ನಿ ! ಇದರ ನಿರ್ವಹಣತಂತ್ರವಿದು : ಗತಕಾಲದ ಒಂದು ತತ್ತ್ವ ಶಾಸ್ತ್ರೀಯ ಸಂಹಿತೆಯನ್ನು ಆಧಾರಗ್ರಂಥವಾಗಿ ಆಯಬೇಕು ; ಅದು ಎಷ್ಟು ಎಷ್ಟು ಹಳೆಯದೋ ಅಸ್ಪಷ್ಟವೋ ಶೀರ್ಣವೋ ಅಷ್ಟು ಅಷ್ಟು ಅನುಕೂಲ; ಅದರ ಶ್ಲೋಕಗಳನ್ನು ಮಂದ್ರಗಂಭೀರ ಮತ್ತು ತಾರತೀವ್ರ ಧಾಟಿಗಳಲ್ಲಿ, ಸಾಧ್ಯವಾದರೆ ವಿಶಿಷ್ಟ ಸಂಗೀತ ರೇಖೆಗಳ ಸಹಿತ, ಓದಿ ಸಭಾಸದರಲ್ಲಿ ನಿಗೂಢ ಗಹನ ನಿರೀಕ್ಷಣ ಮನೋಭಾವವನ್ನು ನಿರ್ಮಿಸಬೇಕು ; ಕೊನೆಯ ದಾಗಿ ವ್ಯಾಖ್ಯಾನಕಾರನ ಕಲ್ಪನೆ ಪ್ರತಿಭೆ ವರ್ತಮಾನ ಜ್ಞಾನ ಮುಂತಾದವನ್ನು ಅನುಸರಿಸಿ ವಾಕ್ಪ್ರವಾಹವನ್ನು ನಿರರ್ಗಳವಾಗಿ ಹರಿಯಗೊಡಬೇಕು ! ಇಲ್ಲಿಯ ಮೊದಲ ಬಲಿ: ಅರಿವು ! ಅಪಮಾಹಿತಿ ಪ್ರಸಾರದ ಅತಿರೇಕ.

## ಅನುಬಂಧ ೨

# ಭವಿಷ್ಯವಾಚನದ ಜನಪ್ರಿಯತೆ

ಭವಿಷ್ಯವಾಚನ ಇಷ್ಟೊಂದು ಜನಪ್ರಿಯವಾಗಿರುವುದರ ರಹಸ್ಯವೇನು? ಇಂದು ಗಣಕ (computer) ಕೂಡ ಈ ಹಸನು ಹೊಲದಲ್ಲಿ ತನ್ನ ಹುಲುಸು ಬೆಳೆಯನ್ನು ಸಮೃದ್ಧವಾಗಿ ಕೊಯ್ಲು ಮಾಡುತ್ತಿದೆ.

ನಾನು ವಾಸವಾಗಿರುವುದು ಮೈಸೂರಿನಲ್ಲಿ: ಶಿಕ್ಷಣ ಸಂಸ್ಥೆಗಳು, ವಿಜ್ಞಾನಮಂದಿರಗಳು, ಗ್ರಂಥಾಲಯಗಳು, ಕಾರ್ಖಾನೆಗಳು ಮುಂತಾದ ನವ ನಾಗರಿಕತೆಯ ಸಕಲ ಪರಿಕರಗಳೂ ವಿಜೃಂಭಿಸುತ್ತಿರುವ ಆಧುನಿಕ ನಗರವಿದು. ವಿಜ್ಞಾನಿಗಳು, ತಂತ್ರವಿದರು, ವಿದ್ವಾಂಸರು ಎಲ್ಲರೂ ಇಲ್ಲಿದ್ದಾರೆ. ಅಂದ ಮೇಲೆ ವೈಜ್ಞಾನಿಕ ಮನೋಧರ್ಮ ಇಲ್ಲಿಯ ಜನಜೀವನದ ಆಧಾರಶ್ರುತಿ ಆಗಿರಬೇಕೆಂದು ನಿರೀಕ್ಷಿಸುವುದು ಸಹಜ. ಆದರೆ ಪರಿಸ್ಥಿತಿ ತದ್ವಿರುದ್ಧ. ಈ ದ್ವಂದ್ವ ಅಥವಾ ವೈರುದ್ಧ್ಯ, ಪ್ರಪಂಚದ ಇತರ ಆಧುನಿಕ ನಗರಗಳನ್ನೂ ಬಿಟ್ಟಿಲ್ಲ. ಇತರ ನಗರಗಳಲ್ಲಿಯಂತೆ ಇಲ್ಲಿಯೂ ಫಲಜ್ಯೋತಿಷಿಗಳ (astrologers) ದಂಡು ಮತ್ತು ಫಲಜ್ಯೋತಿಷ್ಯ (astrology) ಕುರಿತ ವಾಙ್ಮಯದ ಹಿಂಡು ಯಥೇಚ್ಛವಾಗಿ ದೊರೆಯುತ್ತವೆ. ಅಮೆರಿಕದ ಯಾವುದೇ ಮುಂದುವರಿದ ಪಟ್ಟಣ ಕುರಿತು ಕಾರ್ಲ್ ಸಗಾನ್ ಬರೆದಿರುವ ಮಾತು ನಮ್ಮ ಪಟ್ಟಣಗಳನ್ನು ಕುರಿತಂತೆ ಇನ್ನಷ್ಟು ನಿಜ: ಪುಸ್ತಕ ಮಳಿಗೆಗೆ ಹೋಗಿ ಖಗೋಳವಿಜ್ಞಾನ ಕುರಿತು ಒಂದು ಪುಸ್ತಕ ಕೇಳಿ—ನೀವು ನಿರಾಶ ರಾಗುವಿರಿ; ಫಲಜ್ಯೋತಿಷ್ಯ ಕುರಿತ ಒಂದು ಪುಸ್ತಕ ಕೇಳಿ—ಪುಸ್ತಕಗಳ ಪೂರವೇ ನಿಮ್ಮೆದುರು ಹರಿಯುತ್ತದೆ!

ಆದ್ದರಿಂದ ಈ ಲೇಖನದ ಆರಂಭದಲ್ಲಿ ಎತ್ತಿದ ಪ್ರಶ್ನೆಗೆ ಸರಳ ಉತ್ತರ: ಜನರ ಒಂದು ಉತ್ಕಟಾಶಯವನ್ನು ಭವಿಷ್ಯವಾಚನ ಪೂರೈಸುವುದ ರಿಂದ ಅದು ಪ್ರಪಂಚಾದ್ಯಂತ ಜನಪ್ರಿಯವಾಗಿದೆ. ಸಾರ್ವಜನಿಕವಾಗಿ ಅದನ್ನು ಖಂಡಿಸುವುದೊಂದು ಗೀಳಾಗಿದೆ, ಅಂತಸ್ಥಿನ ಚಪಲವಾಗಿದೆ, ವಿಚಾರವಾದದ ಕುರುಹಾಗಿದೆ; ಆದರೆ ಖಾಸಗಿಯಾಗಿ ಅದನ್ನು ಆಶ್ರಯಿಸುವುದೊಂದು

ದೌರ್ಬಲ್ಯವಾಗಿದೆ, ಭಯದ ಸಂಕೇತವಾಗಿದೆ, ಚಂಚಲಮತಿಯ ಅವಲಂಬನೆಯಾಗಿದೆ.

ಅರಿಯದೇ ಜನ ಈ ತೆರನಾಗಿ ವರ್ತಿಸುವರೆನ್ನುವಂತಿಲ್ಲ. ಏಕೆಂದರೆ ಇಂದು ಪ್ರಪಂಚಾದ್ಯಂತ ವಿಜ್ಞಾನ ಮತ್ತು ತಂತ್ರವಿದ್ಯೆ, ಜೊತೆಗೆ ಇವುಗಳಿಂದ ಲಭಿಸಿರುವ ಫಲಗಳು, ವ್ಯಾಪಕವಾಗಿ ಪಸರಿಸಿವೆ. ಖಾಸಗಿ ಬದುಕಿನ ಅತಿ ಗೋಪ್ಯ ಸನ್ನಿವೇಶವೇ ಆಗಲಿ, ಸಾರ್ವಜನಿಕ ಜೀವನದ ಪ್ರಪಂಚ ಪ್ರಕಟಿತ ಘಟನೆಯೇ ಆಗಲಿ ತಂತ್ರವಿದ್ಯೆಯಿಂದ ಪ್ರಭಾವಿತವಾಗದೆ ಇಲ್ಲ. ಸರ್ವಸಂಗ ಪರಿತ್ಯಾಗಿ ಸಂನ್ಯಾಸಿಕೂಡ ತನ್ನ ದೈವಿಕ ಸಂದೇಶ ಪ್ರಸಾರಕ್ಕೆ ತಂತ್ರವಿದ್ಯೆ ಒದಗಿಸಿರುವ ವರಗಳಿಗೆ ಶರಣಾಗುವುದು ಅನಿವಾರ್ಯ. ಇಲ್ಲೆಲ್ಲ ಮನುಷ್ಯನಿಗೆ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಅರಿವಿಗೆ ಬರುವ ಸಂಗತಿ ಒಂದುಂಟು :

ನಿಸರ್ಗದ ಜೊತೆ ಮನುಷ್ಯ ವ್ಯವಹರಿಸುವಾಗ ವಿಜ್ಞಾನ ಮೈದಳೆಯುತ್ತದೆ. ಇದರಲ್ಲಿ ಪ್ರಕಟವಾಗುವ ವಿಧಿನಿಯಮ ಸೂತ್ರಸಿದ್ಧಾಂತಗಳನ್ನು ಅದೇ ನಿಸರ್ಗದಿಂದ ಆಯ್ದ ವಿವಿಧ ಪದಾರ್ಥಗಳ ಮೇಲೆ ಅನ್ವಯಿಸಿದಾಗ—ಅಂದರೆ ನಿಸರ್ಗವನ್ನು ಅನುಕರಿಸಿದಾಗ—ತಂತ್ರವಿದ್ಯೆ ಬೆಳೆಯುತ್ತದೆ. ಇದು ಮನುಷ್ಯನಿಗೆ ಸಮೃದ್ಧವಾಗಿ ಜೀವನ ಸೌಕರ್ಯಗಳನ್ನು ಒದಗಿಸುವ ಕಾಮಧೇನು, ಜೊತೆಗೆ ನಿಸರ್ಗವನ್ನು ಬೋಳಿಸಿ ಅಥವಾ ಲೂಟಿಮಾಡಿ ಪರಿಸರ ಮಾಲಿನ್ಯಕ್ಕೆ ಕಾರಣವಾಗುವ ದಾನವ ಶಕ್ತಿ ಕೂಡ. ಈ ವಿರುದ್ಧ ಬಲಗಳ —ವರ ಮತ್ತು ಶಾಪ—ನಡುವೆ ಸಮತೋಲ ಸಾಧಿಸುವಲ್ಲಿ ವಿವೇಕ ಮಹತ್ತ್ವದ ಪಾತ್ರ ವಹಿಸುತ್ತದೆ. ಇಂದಿನ ಸಾರ್ವತ್ರಿಕ ಪ್ರತಿಕೂಲ ಪರಿಸರ-ಪರಿಸ್ಥಿತಿಯ ಮುಖ್ಯ ಕಾರಣ ಈ ವಿವೇಕದ ಗೈರುಹಾಜರಿ, ದುರಾಶೆ ಲೋಭಗಳ ಅತಿಪ್ರಾಬಲ್ಯ. ಇದು ಹಾಗಿರಲಿ. ಇವೆಲ್ಲ ಕ್ರಿಯಾಕಲಾಪಗಳಲ್ಲಿಯೂ ಮನುಷ್ಯ ನಿಸರ್ಗ ವಿಧಿಸುವ ಶಿಸ್ತಿಗೆ ಬದ್ಧ ಮತ್ತು ಅಧೀನ ಆಗಿರತಕ್ಕದ್ದು. ಇಲ್ಲವಾದರೆ ಈತ ವಿಫಲನಾಗುವುದು ಶತಸ್ಸಿದ್ಧ.

ಸಮಗ್ರ ತತ್ತ್ವವಿದು : ನಿಸರ್ಗವಿರೋಧಿ ಮಾನವಜೀವನವಿಲ್ಲ ; ನಿಸರ್ಗಾನುವರ್ತಿ ಜೀವನವೊಂದೇ ಸಾಧು, ಸಾಧ್ಯ ಮತ್ತು ಸಿಂಧು.

ಭವಿಷ್ಯವಾಚನ ಕುರಿತಂತೆ ಈ ತತ್ತ್ವದ ಅನ್ವಯವೇನು ?

ನನ್ನ ಯಾವ ಪ್ರಯತ್ನ ಅಥವಾ ಇಚ್ಛೆ ಇಲ್ಲದೇ ನಾನು ವರ್ತಮಾನ

ದಲ್ಲಿದ್ದೇನೆ, ಇದರಿಂದ ಮುಂದಕ್ಕೆ—ಅಂದರೆ ಭವಿಷ್ಯಕ್ಕೆ—ನಾನು ಇಣುಕ ಬಲ್ಲೆನೇ ? ಅಂದರೆ ಸತತ ಏಕದಿಶೆಯಲ್ಲಿ ಏಕವೇಗದಿಂದ ಸ್ವತಂತ್ರವಾಗಿ ಪ್ರವ ಹಿಸುತ್ತಿರುವ 'ಕಾಲ'ದ ನಿಯಮಗಳನ್ನು ಉಲ್ಲಂಘಿಸುವುದು ಸಾಧ್ಯವಾದೀತೇ? ಈ ಲೇಖನವನ್ನು ೨೦-೯-೧೯೭೨ರಂದು ಬರೆಯುತ್ತಿದ್ದೇನೆ. ೨೧-೯-೧೯೭೨ರ ವಾಸ್ತವ ಚಿತ್ರವನ್ನು ಈಗ ನೋಡಬಲ್ಲೆನೇ ? ಮುಂದಿನ ವರ್ಷ ಇದೇ ದಿನಾಂಕದಂದು, ೨೦-೯-೧೯೭೩, ದೇಶದ ಪರಿಸ್ಥಿತಿ ಹಾಗಿರಲಿ, ಖುದ್ದು ನನ್ನ ಸ್ಥಿತಿಗತಿ ಹೇಗಿರಬಹುದು ? ಭವಿಷ್ಯವಾಚನ ಅಸಾಧ್ಯ ಎಂಬುದೊಂದೇ ಸಮರ್ಪಕ ಉತ್ತರ. ಭೂತಕಾಲಯಾನ ಕೂಡ ನಮ್ಮ ಅಳವಿಗೆ ಮೀರಿದ್ದು. ನಿಸರ್ಗದ ಈ ನಿಷ್ಠುರ ಅವಿಪರ್ಯಯಶೀಲ ನಿಯಮಗಳಿಗೆ ಅಪವಾದವಾಗಿ ವ್ಯಕ್ತಿ ಅಥವಾ ಘಟನೆ ಇದ್ದರೆ ಅಲ್ಲೇನೋ ಮೋಸ, ಕಣ್ಕಟ್ಟು ಅಥವಾ ವಂಚನೆ ಮುಸುಕು ಕುಳಿತಿದೆ ಎಂದು ಧೈರ್ಯವಾಗಿ ಘೋಷಿಸಬಹುದು.

ಭೂತಕಾಲ ಕುರಿತಂತೆ ಒಂದು ಮಾತು. ವಿಶ್ವದಲ್ಲಿರುವ ಯಾವ ಕಾಯವೂ ಅದು ಈಗ ಅಲ್ಲಿರುವಂತೆ ನಮಗೆ ಪ್ರಕಟವಾಗುವುದಿಲ್ಲ. ಅಲ್ಲಿಂದ ಹೊರಟ ಬೆಳಕಿನ ಕಿರಣ ಸೆಕೆಂಡಿಗೆ ೩೦೦,೦೦೦ ಕಿಮೀ ವೇಗದಲ್ಲಿ ನೇರಗೆರೆ ರೇಖಿಸುತ್ತ ನಮ್ಮನ್ನು ತಲಪುವ ತನಕ ಅದು ನಮಗೆ ಅಗೋಚರ. ಉದಾ ಹರಣೆಗೆ ಧ್ರುವ ನಕ್ಷತ್ರ ನಮ್ಮಿಂದ ೧೦೮೫ ಜ್ಯೋತಿರ್ವರ್ಷ ದೂರದಲ್ಲಿದೆ : ೧೦೮೫ ವರ್ಷಗಳ ಹಿಂದೆ ಇದ್ದ ಆ ನಕ್ಷತ್ರವನ್ನು ಇಂದು ನಾವು ನೋಡುತ್ತಿ ರುವೆವು ಎಂದರ್ಥ. ಈಗ ಅದು ಹೇಗಿದೆ ? ಇನ್ನೂ ೧೦೮೫ ವರ್ಷ ಕಾದು ನೋಡಬೇಕು. ನಮ್ಮಿಂದ ೪೫,೦೦೦ ಜ್ಯೋತಿರ್ವರ್ಷ ದೂರದಲ್ಲಿರುವ ಇನ್ನೊಂದು ನಕ್ಷತ್ರದ ಅಂದಿನ—೪೫,೦೦೦ ವರ್ಷಗಳಷ್ಟು ಹಿಂದಿನ—ಚಿತ್ರ ಇಂದು ನಮಗೆ ಪ್ರಕಟವಾಗುತ್ತದೆ. ಆದ್ದರಿಂದ ವಿಶ್ವದಲ್ಲಿ ನಾವು ಆಳ ಆಳ ಇಳಿದಂತೆ (ಅಂದರೆ ದೂರ ದೂರ ಹೋದಂತೆ) ಕಾಲದಲ್ಲಿ ಹಿಂದೆ ಹಿಂದೆ ಸರಿ ಯುತ್ತೇವೆ. ಆದರೆ ಈ ಸೂಕ್ಷ್ಮ ಸಂಗತಿಗಳನ್ನು ಲೌಕಿಕ ದೈನಂದಿನ ವ್ಯವ ಹಾರಗಳಲ್ಲಿ ಪರಿಗಣಿಸಬೇಕಾಗಿಲ್ಲ.

ಪರಿಸ್ಥಿತಿ ಇಷ್ಟು ಸ್ಫುಟವಾಗಿದ್ದರೂ ಭವಿಷ್ಯವಾಚನ ಇಷ್ಟೊಂದು ಜನ ಪ್ರಿಯ ಆಗಲು ಕಾರಣವೇನು ?

ಇದನ್ನು ಅರಸುವ ಮುನ್ನ ಪ್ರತಿಯೊಬ್ಬನೂ ತನಗೆ ತಾನೇ ಈ ಮುಂದಿನ ಹನ್ನೆರಡು ಪ್ರಶ್ನೆಗಳನ್ನು ಕೇಳಿಕೊಂಡು ಅವುಗಳಿಗೆ ಪ್ರಾಮಾಣಿಕ ಉತ್ತರ

ಕೊಡಲು ಪ್ರಯತ್ನಿಸಬೇಕು. ಆ ನೆಲೆಯಲ್ಲಿ ಸ್ವಂತವ್ಯಕ್ತಿತ್ವವನ್ನು ವಿಶ್ಲೇಷಿಸುವುದು ಕೂಡ ಸಾಧ್ಯವಿದೆ.

೧ ನನಗೆ ನನ್ನ ವ್ಯಕ್ತಿತ್ವಾಂತರ್ಗತ ಸಾಮರ್ಥ್ಯದಲ್ಲಿ ವಿಶ್ವಾಸವಿದೆಯೇ?

ಇಲ್ಲವಾದಾಗ ಅಳುಕು, ಅಂಜಿಕೆ, ಪರಾವಲಂಬನೆ ಮುಂತಾದವು ನನ್ನ ವ್ಯಕ್ತಿತ್ವದ ಪ್ರಮುಖ ರೇಖೆಗಳಾಗುತ್ತವೆ.

೨ ನನಗೆ ನಾನು ಹಿಡಿದ ಕಾರ್ಯದ ಸಾಧ್ಯಾಸಾಧ್ಯತೆ ಬಗ್ಗೆ ಕಲ್ಪನೆ ಇದೆಯೇ ?

ಇಲ್ಲವಾದಾಗ ಪರಿಸ್ಥಿತಿ ನನ್ನ ಹದಮೀರಿ ನಾನು ಅಧೀರನಾಗುತ್ತೇನೆ.

೩. ನನಗೆ ಇತರ ವ್ಯಕ್ತಿಗಳ ಬಗ್ಗೆ ಗೌರವವಿದೆಯೇ ?

ಇಲ್ಲವಾದಾಗ ಇತರರೂ ನನ್ನ ಬಗ್ಗೆ ಅಗೌರವ ತಳೆಯುತ್ತಾರೆ. ಆಗ ನಾನು ಅನಾಥ ಪ್ರಜ್ಞೆಯಿಂದ ತಾಡಿತನಾಗುತ್ತೇನೆ.

೪ ನನಗೆ ನಾನು ನಿರ್ವಹಿಸುತ್ತಿರುವ ಕರ್ತವ್ಯದ ಬಗ್ಗೆ ಶ್ರದ್ಧೆ ಇದೆಯೇ ?

ಇಲ್ಲವಾದಾಗ ನಾನು ಯಾಂತ್ರಿಕ, ಮತ್ತು ಅನೇಕ ವೇಳೆ ಅಪ್ರಾಮಾಣಿಕ, ವಿಧಾನಗಳಿಗೆ ಶರಣಾಗಿ ಜೀವನೋಲ್ಲಾಸ ಕಳೆದುಕೊಳ್ಳುತ್ತೇನೆ.

೫ ನನಗೆ ಪ್ರತಿಯೊಂದು ವೈಫಲ್ಯವನ್ನೂ ಹೊಸ ಸವಾಲೆಂದು ಸ್ವೀಕರಿಸುವ ಕೆಚ್ಚು ಇದೆಯೇ ?

ಇಲ್ಲವಾದಾಗ ನಾನು ಉತ್ತರಕುಮಾರನಾಗಿ ನನ್ನ ವೈಫಲ್ಯಕ್ಕೆ ವೈಚಾರಿಕ ಕಾರಣ ಹುಡುಕುವುದರಲ್ಲಿ ವೃಥಾ ಕಾಲಹರಣ ಮಾಡುತ್ತೇನೆ.

೬ ನನಗೆ ಜೀವನಮೌಲ್ಯಗಳ ಅನುಷ್ಠಾನದ ಬಗ್ಗೆ ಭರವಸೆ ಇದೆಯೇ?

ಇಲ್ಲವಾದಾಗ ನನ್ನ ಜೀವನ ಅಸಂಖ್ಯ ವೈರುಧ್ಯಗಳಿಂದ ಪೀಡಿತವಾಗುತ್ತದೆ.

೭ ನಾನು ನನ್ನ ಬಾಳ ಕನಸುಗಳನ್ನು ಅವರಿವರ ನಂಬುಗೆಗಳ ಮೇಲೆ ಕಟ್ಟಿರುವೆನೇ ?

ಹಾಗಾದರೆ ನನಗೆ ತಿಳಿಯದಂತೆ ನಾನೇ ನನ್ನ ಗೋರಿಯನ್ನು ತೋಡುತ್ತಿರುವೆನು.

೮ ನಾನು ನನ್ನ ಸೋಲುಗಳಿಗೆ ಇತರರನ್ನು ಬಲಿಪಶುಗಳಾಗಿ ಮಾಡುವೆನೇ ?

ಹಾಗಾದರೆ ನನ್ನ ಸ್ಥಾನಭದ್ರತೆ ಕುರಿತು ನಾನು ಸದಾ ಭಯಂಗ್ರಸ್ತನಾಗಿ ರುವೆನು.

೯ ನಾನು ನಾನೇ ವಿಶ್ವಕೇಂದ್ರವೆಂದು ಅಹಂಕಾರದಿಂದ ಬೀಗುತ್ತಿರು ವೆನೇ ?

ಹಾಗಾದರೆ ನಾನು ಸದಾ ನನ್ನ ನೆರಳಿಗೂ ಹೆದರುತ್ತಿರುವೆನು.

೧೦ ನಾನು ಎಲ್ಲವನ್ನೂ ಕಬಳಿಸುವ ಮತ್ತು ಏನನ್ನೂ ಕೊಡದಿರುವ ಪರಮ ಸ್ವಾರ್ಥಿ ಆಗಿರುವೆನೇ ?

ಹಾಗಾದರೆ ನಾನು ಸದಾ ಅತೃಪ್ತ ಮನಸ್ಕನಾಗಿ ಅಸಹಾಯಕ ಭಾವ ದಿಂದ ಚಡಪಡಿಸುತ್ತಿರುವೆನು.

೧೧ ನಾನು ನೀತಿಯನ್ನು ಉಲ್ಲಂಘಿಸಿ ಯಶಸ್ಸಿನೆಡೆಗೆ ಧಾವಿಸುತ್ತಿರು ವೆನೇ ?

ಹಾಗಾದರೆ ನಾನು ಆಂತರಿಕ ತುಮುಲದಿಂದ ತೀವ್ರ ಜರ್ಜರಿತ ನಾಗಿರುವೆನು.

೧೨ ನಾನು ಇತರರ ರಾಗಭಾವಗಳಿಗೆ ಕಿಂಚಿತ್ತು ಕಿಮ್ಮತ್ತೂ ಕೊಡದೆ ನಿರಂಕುಶವಾಗಿ ವರ್ತಿಸುವೆನೇ ?

ಹಾಗಾದರೆ ನನ್ನ ರೀತಿ ನೀತಿ ಬಗ್ಗೆ ಸ್ವತಃ ನನಗೇ ಭರವಸೆ ಇಲ್ಲದವ ನಾಗಿರುವೆನು.

ಮೊದಲ ಎಲ್ಲ ಆರು ಪ್ರಶ್ನೆಗಳಿಗೆ ಸಕಾರಾತ್ಮಕವೂ ತರುವಾಯದ ಎಲ್ಲ ಆರು ಪ್ರಶ್ನೆಗಳಿಗೆ ನಕಾರಾತ್ಮಕವೂ ಆದ ಉತ್ತರ ಕೊಡಬಲ್ಲವರು ಬುದ್ಧ, ಸಾಕ್ರೆಟೀಸ್, ವಿವೇಕಾನಂದ, ಗಾಂಧಿ, ಐನ್‌ಸ್ಟೈನ್ ಪರಂಪರೆಗೆ ಸೇರಿದ ಮಹಾನುಭಾವರು. ಉಳಿದ ಸಾಮಾನ್ಯರು ? ಇವರಲ್ಲಿ ಎಲ್ಲಿಯೋ ಏನೋ ಒಂದು ಅಳುಕು, ಹಿಂಜರಿಕೆ ಅಥವಾ ಅಂಜಿಕೆ ಇದ್ದೇ ಇರುತ್ತದೆ. ಕಾರಣ ವೇನು ?

ಅನುಭೋಗಾತಿರೇಕತ್ವ (consumerism, ಅಂದರೆ ಐಹಿಕ ಭೋಗ ಜೀವನದ ಆಮಿಷಗಳಿಗೆ ಬಲಿಯಾಗಿರುವ ಮಾನಸಿಕ ಸ್ಥಿತಿ) ಎಂಬ ಜ್ವರಗ್ರಸ್ತ ವಾಗಿರುವ ಇಂದಿನ ಸಮಾಜ ಮತ್ತು ಸರ್ಕಾರಗಳಲ್ಲಿ ಸಾಮಾನ್ಯ ವ್ಯಕ್ತಿಯೊಬ್ಬ ಮಾನವೀಯತೆಯನ್ನೂ ವಿಚಾರಶೀಲತೆಯನ್ನೂ ಕಳೆದುಕೊಂಡು ಕೇವಲ ಯಂತ್ರಮಾನವನಾಗಿರುತ್ತಾನೆ. ಇಂಥ ಸನ್ನಿವೇಶದಲ್ಲಿ ಆತ ತನ್ನ ಅಖಂಡ

ಜೀವನವನ್ನು (ಕೃತಕವಾಗಿ) ಎರಡು ಪ್ರತ್ಯೇಕ ವಾಯುಬಂಧ ಖಂಡಗಳೆಂದು ಭ್ರಮಿಸುತ್ತಾನೆ: ಸಾರ್ವಜನಿಕ ಮುಖವೊಂದು, ಖಾಸಗಿ ಮುಖ ಇನ್ನೊಂದು. (ವಾಯುಬಂಧ ಎಂದರೆ ಒಂದರಿಂದ ಇನ್ನೊಂದಕ್ಕೆ ವಾಯು ಕೂಡ ಸೋಂಕ ದಂಥ ವಿವಿಕ್ತತೆ.)

ಸಮಾಜದ ಸದ್ದುಗದ್ದಲಗಳಲ್ಲಿ ಮತ್ತು ದೈನಂದಿನ ದಂದುಗಗಳಲ್ಲಿ ಈತನೂ ಯಥಾಮತಿ ಯಥಾಶಕ್ತಿ ಭಾಗಿಯಾಗಿ ತನ್ನ ದೇಣಿಗೆ ಸಲ್ಲಿಸುತ್ತ ಯಶೋಗಾಮಿಯಾಗಲು ಸತತ ಹೆಣಗುತ್ತಿರುವನು : ಗೆಲುವಿನೆಡೆಗೆ ನಡೆವ ಹಾದಿ ಮುಖ್ಯವಲ್ಲ, ಹೇಗಾದರೂ ಗೆದ್ದರಾಯಿತು. ಯಶಸ್ಸಿನಂತೆ ಯಶಸ್ವಿ ಆಗುವುದು ಬೇರಾವುದೂ ಇಲ್ಲ. ಸಾರ್ವಜನಿಕ ಮುಖದ ಈ ಕೃತ್ರಿಮತೆ (ಅಥವಾ ಛಿದ್ರಿತ ವ್ಯಕ್ತಿತ್ವ) ಈತನ ಮನಸ್ಸು ಮತ್ತು ದೇಹಗಳ ಮೇಲೆ ತನ್ನ ಕರಾಳ ಛಾಪು ಒತ್ತಿಯೇ ಒತ್ತುತ್ತದೆ.

ಈ ಪಾಪ ಪ್ರಜ್ಞೆ ಮತ್ತು ಇದರಿಂದ ಪುಟಿಯುವ ಭಯ ಈತನ ಖಾಸಗಿ ಮುಖದ ಮೇಲೆ ವಿನಾಶಕರ ಪರಿಣಾಮ ಬೀರುತ್ತದೆ—ಲೋಹ ಪಾತ್ರೆಯೊಳಗೆ ತೀಕ್ಷ್ಣ ಆಮ್ಲ ಸಂಗ್ರಹಿಸಿಟ್ಟಾಗ ಕ್ಷರಣ (corrosion) ಸಂಭವಿಸುವಂತೆ. ಭಯನಿವಾರಣೆಯಾದ ಹೊರತು ಈತನಿಗೆ ಮನಃಸ್ವಾಸ್ಥ್ಯವಿಲ್ಲ. ಇದಕ್ಕೇನು ಮಾಡುವುದು ? ದೇವಮಾನವರನ್ನು ಆಶ್ರಯಿಸುವುದು, ವೇದಾಂತ ಪ್ರವಚನಗಳನ್ನು ಆಲಿಸುವುದು, ಧಾರ್ಮಿಕ ಆಚರಣೆಗಳಲ್ಲಿ ಮಗ್ನನಾಗಿರುವುದು, ಹಾಡುಹರಕೆಗಳನ್ನು ಒಪ್ಪಿಸುವುದು, ತೀರ್ಥಕ್ಷೇತ್ರಾದಿಗಳಿಗೆ ಯಾತ್ರಿಸುವುದು, ಫಲಜ್ಯೋತಿಷಿಗಳ ಜೊತೆ ಗುಪ್ತಸಮಾಲೋಚನೆ ಗೈಯುವುದು ಮುಂತಾದ ಅಸ್ವಾಭಾವಿಕ, ಅನಾವಶ್ಯಕ, ಅನುಪಯುಕ್ತ ಹಾಗೂ ಅರ್ಥಹೀನ ವಿಧಿವಿಧಾನಗಳ ಮೂಲಕ ವರ್ತಮಾನವನ್ನು ಶುದ್ಧೀಕರಿಸಲು ಹೆಣಗುವುದು, ಮತ್ತು ಭವಿಷ್ಯವನ್ನು ಸುಗಮವಾಗಿಸಲು ಪ್ರಯತ್ನಿಸುವುದು.

ಭೂತದ ಸಂಚಿತ (ದುಷ್-)ಫಲ ವರ್ತಮಾನ. ಆದ್ದರಿಂದ ಭವಿಷ್ಯ ಸುಗಮವಾಗಬೇಕಾದರೆ ವರ್ತಮಾನವನ್ನು ಶುದ್ಧವಾಗಿಡುವುದೊಂದೇ ಋಜು ಕ್ರಮ. ದಿನವಹಿ ಲೆಕ್ಕ ಸರಿಯಾಗಿದ್ದರೆ ಖಾತೆ ಲೆಕ್ಕ ತಂತಾನೇ ಸರಿಯಾಗಿರುತ್ತದೆ ! ರೋಗಕಾರಣವನ್ನು ನಿರ್ಮೂಲಿಸಿದಾಗ ರೋಗಚಿಹ್ನೆಗಳು ತುತಾವೇ ಮಾಯವಾಗುತ್ತವೆ. ಹೀಗಲ್ಲದೆ ಚಿಹ್ನೆಗಳನ್ನು ಕೃತಕ ವಿಧಾನಗಳಿಂದ ಹತ್ತಿ

ಕ್ಕಲು ತೊಡಗಿದರೇನಾಗುತ್ತದೆ? ಜ್ವರಮಾಪಿಯುಲ್ಲಿಯ ಪಾದರಸಸ್ತಂಭ ವನ್ನು ಕೆಳಕ್ಕಿಳಿಸಿದರೆ ಜ್ವರವಿಳಿಯದು.

ನಾನು ಹೇಳುತ್ತಿರುವುದು ಉತ್ಪ್ರೇಕ್ಷೆ, ಕಾಮಾಲೆ ನೋಟದ ವಿಕೃತ ಚಿತ್ರ ಎಂದು ನಿಮಗೆ ಅನ್ನಿಸುವ ಸಾಧ್ಯತೆ ಇದೆ. ಏಕೆಂದರೆ ಕಲುಷಿತ ಪರಿ ಸರಕ್ಕೆ ಒಗ್ಗಿ ಹೋದವನಿಗೆ ಶುದ್ಧ ವಾತಾವರಣ ಅಸ್ವಾಭಾವಿಕವೆಂದೆನ್ನಿಸು ವುದು ವಿರಳವಲ್ಲ. ಈಗ ಒಂದು ಪ್ರಯೋಗ ಮಾಡಿ ನೋಡಿ. ನಿಮ್ಮ ನಿಕಟ ಪರಿಸರದಲ್ಲಿ ದಿನದಿನ ನಡೆಯುತ್ತಿರುವ ವಿದ್ಯಮಾನಗಳನ್ನು ನಿರಪೇಕ್ಷವಾಗಿ ನಿರ್ಲಿಪ್ತವಾಗಿ ನಿರ್ಮೋಹಿಗಳಾಗಿ ಗಮನಿಸಿ :

* ಪ್ರಾಮಾಣಿಕ ಸಾಮಾಜಿಕ ಸಾರ್ವಜನಿಕ ಸೇವೆಗೆ ನೀವು ಬದ್ಧಕಂಕಣ ರಾಗಿ ಕಳಕ್ಕೆ ಇಳಿಯಿರಿ. ನಿಮ್ಮ ಜೊತೆಯಲ್ಲೇ ನಿಮಗೆ ಸಮಾಂತರ ವಾಗಿ ಇನ್ನೊಬ್ಬ ದೇವರು ಅಥವಾ ಧರ್ಮದ ಹೆಸರಿನಲ್ಲಿ ಅದೇ ಸೇವೆಗೆ ಕಳಕ್ಕೆ ಇಳಿಯುತ್ತಾನೆಂದು ಭಾವಿಸಿ. ಯಾರ ಪ್ರಯತ್ನ ಅತಿಕ್ಷಿಪ್ರವಾಗಿ ಕಾರ್ಯಗತವಾಗುತ್ತದೆ?

ನೀತಿ : ದೇವರು, ಧರ್ಮ, ಮತ, ಮಂದಿರ, ಜಾತಿ, ಕೋಮು ಎಂಬ ಜ್ಞಾತೃನಿಷ್ಠ ಅಸ್ಪಷ್ಟತೆಗಳು ಗೆಲ್ಲುವಂತೆ, ಗೆಲ್ಲುವ ಹಾದಿಯಲ್ಲಿ ಸಾಮಾಜಿಕ ಹಾನಿ ಮಾಡುವಂತೆ, ಶುದ್ಧ ಸಾರ್ವಜನಿಕ ತತ್ತ್ವ ಮೌಲ್ಯಗಳನ್ನು ಕುರಿತ ದುಡಿಮೆಗಳು ಯಶಪ್ಪು ಗಳಿಸುವುದಿಲ್ಲ. ದೇವಕಾರ್ಯದಲ್ಲಿ ಅಮಲಿದೆ. ಜನ ಕಾರ್ಯದಲ್ಲಿ? ಬೆವರು ಮಾತ್ರ.

*. ನೀವು ಯಾವುದೇ ಜಾತಿ, ಮತ, ಪಂಥಗಳಿಗೆ ಸೇರಿದವರಾಗಿರಿ. ಆ ಹೆಸರಿನ ಒಂದು ಮಂದಿರ ಕುರಿತಂತೆ ಭುಗಿಲೇಳುವ ಕ್ರೂರ ಉನ್ಮಾದ ಗಮನಿಸಿ. ಅದೇ ಹೆಸರಿನ ಒಂದು ರಚನಾತ್ಮಕ ಕೇಂದ್ರ (ಶಾಲೆ, ಆಸ್ಪತ್ರೆ, ಬಾಲವಾಡಿ ಇತ್ಯಾದಿ) ಕುರಿತಂತೆ ನಿಮ್ಮ ಪ್ರಯತ್ನ ಸಪ್ಪಗಿನ ವಿಧಿಯಾಗಿ ಪುಸ್ಸೆನ್ನುತ್ತದೆ.

ನೀತಿ : ಭಯಾಧಾರಿತ ರಾಗಭಾವ ಕ್ಷಿಪ್ರ ಉದ್ರೇಕಕಾರಿ ಮತ್ತು ವಿನಾಶಕಾರಿ. ವಿಚಾರಾಧಾರಿತ ವಿವೇಕ ನಿಧಾನಸಂಚಾರಿ ಮತ್ತು ಸಂಚಯಕಾರಿ.

* ಸಾರ್ವಜನಿಕ ಮುಖದಲ್ಲಿ ಯಶಸ್ವಿ ಎನಿಸಿಕೊಂಡವನಿಗೆ—ಈತನ ಯಶಸ್ಸಿನ ಕಪ್ಪು ಹಿನ್ನೆಲೆ ಏನೇ ಇರಲಿ—ದೊರೆಯುವ ಮನ್ನಣೆ, ಪುರ ಸ್ಕಾರ, ಅಗ್ರಸ್ಥಾನ, ಸೌಲಭ್ಯ ಮುಂತಾದವು ಋಜು ಸಮಾಜಸೇವಕನಿಗೆ

ಎಂದಾದರೂ ದೊರೆಯುತ್ತವೆಯೇ ? ಪರಪುಷ್ಟಜೀವಿಯ 'ಘನವ್ಯಕ್ತಿತ್ವ'ದ ಎದುರು ಕಠಿಣ ಪ್ರಾಮಾಣಿಕ ಶ್ರಮಿಕನ 'ಪೇಲವ ವ್ಯಕ್ತಿತ್ವ' ಮಸುಳುವುದು ಇಂದಿನ ಸಮಾಜದ ರೀತಿಯೇ ಆಗಿದೆ.

ನೀತಿ : ಉಲ್ಕೆಯ ಕೃತಕ ಕ್ಷಣ ಭಂಗುರ ಜ್ಯೋತಿ ನಮ್ಮನ್ನು ಆಕರ್ಷಿಸುವಂತೆ ನಕ್ಷತ್ರದ ದೀರ್ಘಕಾಲಿಕ ದೀಪ್ತಿ ಆಕರ್ಷಿಸದು.

ಕೊನೆಯದಾಗಿ, ನೀವು ಬುದ್ಧ, ಸಾಕ್ರೆಟೀಸ್, ವಿವೇಕಾನಂದ, ಗಾಂಧಿ, ಐನ್‌ಸ್ಟೈನ್ ಮೊದಲಾದ ಯುಗಪ್ರವರ್ತಕ ಮಹಾನುಭಾವರಾಗದಿರಬಹುದು. ಆದರೆ ಅವರು ಕಟ್ಟಿರುವ ದಿಟ್ಟ ಜಾಡಿನಲ್ಲಿ ಗಟ್ಟಿ ಹೆಜ್ಜೆ ಇಡುವ ಗಂಡುಗಲಿಗಳಾಗಿ ಬಾಳುವುದು ಖಂಡಿತ ಸಾಧ್ಯವಿದೆ. ಇಂಥ ಪ್ರಯತ್ನವನ್ನು ಪ್ರಾಮಾಣಿಕವಾಗಿ ಕೈಗೊಳ್ಳುವಾಗ ನಿಮಗೇ ಸ್ಫುರಿಸುತ್ತದೆ : ಭವಿಷ್ಯವಾಚನವೊಂದು ಮೋಸ, ವಂಚನೆ, ದ್ರೋಹ ಮತ್ತು ಘೋರ ಪಾಪ.

ಜಾತಕವ ನಂಬುತ್ತ ಪಾತಕವನೆಸಗುವುದು
ಮೌಲ್ಯಗಳ ಕಡೆಗಣಿಸಿ ಜೀವನವ ರೂಪಿಸುವುದು
ಜೀವನ ಸಮಸ್ಯೆಗಳನೆದುರಿಸದೆ ಹರಕೆ ಹಾ
ಡುಗಳನಾಶ್ರಯಿಸುವುದು ವಂಚನೆ ಕಣಾ ಅತ್ರಿಸೊಸು !

## ಅನುಬಂಧ ೩

# ಪವಾಡಭಂಜಕ ನರೇಂದ್ರ ನಾಯಕ

ನರೇಂದ್ರನಾಯಕರು ಮಂಗಳೂರು ಕಸ್ತೂರ್ಬಾ ವೈದ್ಯಕೀಯ ಕಾಲೇಜಿನಲ್ಲಿ ಜೀವವಿಜ್ಞಾನದ ಪ್ರಾಧ್ಯಾಪಕರು. ಇದು ಅವರ ತೀರ ಸೀಮಿತ ವೃತ್ತಿಮುಖ. ಎಂದೇ ಬಹುಮಂದಿಗೆ ಅಪರಿಚಿತ. ಆದರೆ ತಮ್ಮ ಪ್ರವೃತ್ತಿ ಮುಖದಿಂದ ಅವರು ದೇಶಾದ್ಯಂತ ಪ್ರಸಿದ್ಧರಾಗಿದ್ದಾರೆ. ಪವಾಡಭಂಜಕ, ಸತ್ಯಶೋಧಕ, ವಿಚಾರಪ್ರೇರಕ ನರೇಂದ್ರನಾಯಕ ಎಂದು.

ಶ್ರೀಯುತರು ದಕ್ಷಿಣ ಕನ್ನಡ ಜಿಲ್ಲಾ ವಿಚಾರವಾದಿಗಳ ಸಂಘ, ಮೈಕ್ರೊವೇವ್ ಸ್ಟೇಶನ್ ರೋಡ್, ಮಂಗಳೂರು ೫೭೫೦೦೬ ಈ ಸ್ವಯಂಸೇವಾ ಸಾರ್ವಜನಿಕ ಸಾಮಾಜಿಕೋಪಯುಕ್ತ ವ್ಯವಸ್ಥಾಪನೆಯ ಸ್ಥಾಪಕ ಕಾರ್ಯದರ್ಶಿ, ಕೇಂದ್ರಬಿಂದು, ಸಾಕ್ಷಾತ್ ಉಸಿರು.

ಎಲ್ಲಿ ಕುರುಡು ನಂಬಿಕೆ ಸಾರ್ವಜನಿಕ ಪಿಡುಗಾಗಿದೆಯೋ ಎಲ್ಲಿ ಮಾಯಾಮೋಡಿ ಬಾಜಾಬಜಂತ್ರಿ ಜನಶೋಷಣೆಯ ಮಾಧ್ಯಮವಾಗಿದೆಯೋ ಎಲ್ಲಿ ಮುಗ್ಧ ಮಂದಿಯ ಮೂಕ ಅಜ್ಞಾನ ವಂಚಕರ ಅಕ್ಷಯ ಪಾತ್ರೆ ಆಗಿದೆಯೋ ಅಲ್ಲಿ ನರೇಂದ್ರ ನಾಯಕರ ನರಸಿಂಹಾವತಾರ ಆಗಿಯೇ ಆಗುತ್ತದೆ. ಮೋಸವಂಚನೆಯ ಅಥವಾ ಅಜ್ಞಾನದ ತಳಸಮೂಲವನ್ನವರು ಜನರಿಗೆ ಪ್ರತ್ಯಕ್ಷ ಪ್ರಮಾಣ, ವಿಶ್ಲೇಷಣೆ ಮತ್ತು ವಿವರಣೆ ಸಹಿತ ಇಡೀ ಪ್ರಕರಣವನ್ನು ಎಳೆಎಳೆಯಾಗಿ ಬಿಡಿಸಿ ತೋರಿಸುತ್ತಾರೆ. ಉಳಿಯುವುದೇನು ? ವ್ಯಕ್ತಿಯಲ್ಲಿ ಭ್ರಮನಿರಸನ ಮತ್ತು ಆತ್ಮವಿಶ್ವಾಸದ ಉತ್ಕರ್ಷ.

ಶೂನ್ಯದಿಂದ ಬೂದಿ, ಉಂಗುರ, ನಾಣ್ಯ ಮುಂತಾದವನ್ನು ತಯಾರಿಸಿ ವಿತರಿಸುತ್ತಾರೆ—ಎಂದೂ ಕುಂಬಳಕಾಯಿಯನ್ನಲ್ಲ. ಪಾತ್ರಿಯ ಅಂತಸ್ತು ಗಮನಿಸಿ ಈ ವಿನೂತನ ವಿಶ್ವಾಮಿತ್ರ ಅಥವಾ ದೇವಮಾನವ ತನ್ನ ಸೃಷ್ಟಿಯನ್ನು ಉತ್ಕೃಷ್ಟ ವಿದೇಶಿ ರಿಸ್ಟ್‌ವಾಚಿನ ಮಟ್ಟಕ್ಕೂ ಉತ್ತಾರಣೆಗೊಳಿಸಬಹುದು. ರೂಪಾಯಿ ನೋಟನ್ನು ನಿಮ್ಮ ಕಣ್ಣೆದುರೇ ಸುಟ್ಟು ಪುನರ್ಜನ್ಮ ಅನುಗ್ರಹಿಸಿ ನಿಮಗೆ ಪ್ರದಾನಿಸುತ್ತಾರೆ—ಸಗರಪುತ್ರಭಸ್ಮಕ್ಕೆ ಗಂಗಾಸಲಿಲ ಸಂಸ್ಪರ್ಶವಾದಾಗ

ಆ ವ್ಯಕ್ತಿಗಳು ಎದ್ದು ಬಂದಂತೆ. ಎಣ್ಣೆ ಬೇಡ, ಕಾವು ಇಲ್ಲ. ಬೆಂಕಿಯಂತೂ ಇಲ್ಲವೇ ಇಲ್ಲ : ನಾಯಕರ ದಿವ್ಯ ಮಂತ್ರವಾಣಿಗೆ ಮತ್ತು ದೃಷ್ಟಿತೀಕ್ಷ್ಣತೆಗೆ ನಿಸರ್ಗ ಮಣಿದು ಹೋಮಾಗ್ನಿ ಭುಗಿಲೇಳುತ್ತದೆ ! ನಿಗಿನಿಗಿಯುತ್ತಿರುವ ಅಗ್ನಿಕುಂಡವನ್ನು ಬರಿಗಾಲಿನಲ್ಲಿ ನಡೆದು ದಾಟುತ್ತಾರೆ—ನಿಮ್ಮನ್ನೂ ಅದೇ ರೀತಿ ನಡೆಸುತ್ತಾರೆ : ಅವರ ದಿವ್ಯ ರಕ್ಷೆಯಲ್ಲಿ ನಿಮ್ಮ ಕೂದಲು ಕೂಡ ಕೊಂಕದು. ಹರಿತ ಬಾಳಿನ ಅಲಗಿನ ಮೇಲೆ ನಿಮ್ಮನ್ನು ನಿಲ್ಲಿಸುವುದು ಇವರಿಗೆ ಮೋಜಿನ ಸಂಗತಿ.

"ಆದರೆ ಇವೆಲ್ಲ ಕಣ್ಗಟ್ಟು, ಇಂದ್ರಜಾಲ (magic)" ಎನ್ನುತ್ತಾರೆ ನಾಯಕರು. ನಿಮ್ಮ ಎದುರೇ ರಹಸ್ಯಗಳನ್ನು ಭೇದಿಸಿ ಬಿಡಿಸಿ ವಿವರಿಸುತ್ತಾರೆ. "ನಿಸರ್ಗದಲ್ಲ ಪವಾಡಗಳು ಸಂಭವಿಸುವುದಿಲ್ಲ. ಇದು ಖರೆ. ಖುದ್ದು ನೀವೇ ಒಂದು ಪವಾಡವನ್ನು ನೋಡಿದರೆ ಅಥವಾ ಅನುಭವಿಸಿದರೆ ಅದು ನಿಮ್ಮ ಮನಸ್ಸಿನ ವಿಕೃತಿಯ ಪರಿಣಾಮ. ಅದನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದಾಗ ಅದರ ಪವಾಡತನ ಮಾಯವಾಗುತ್ತದೆ."

ನಾಯಕರು ಪವಾಡಪ್ರಪಂಚಕ್ಕೆ ಒಡ್ಡಿರುವ ಸವಾಲನ್ನು ಇಲ್ಲಿ ತದ್ವತ್ತಾಗಿ ಪ್ರಕಟಿಸಿದೆ.

## Dakshina Kannada Rationalist Association
## Microwave Station Road Mangalore 575 006

### A challenge to those with supernatural powers

**Since 1976 when our association was founded, we have been actively in search of miracles, extrasensory perception and such supernatural phenomena. In 1989 we had offered as award Rs 25,000 to anyone who could demonstrate any such. Since there were no takers the award amount was increased to Rs 50,000 in 1990. Even for this there have been no takers so far. So, in 1992, I, Narendra Nayak, the Secretary of the Association have been authorized to put forward a higher stake. So, complying with this I am herein putting**

forward all my wordly assets (an audited statement of whose worth can be obtained after paying a fee of Rs 250) to anyone who can effectively demonstrate one or more of the following. I shall also solemnly affirm that I shall dedicate the rest of my life to any cause the winner of the challenge shall specify and shall also hand over to him any earnings or assets I may acquire in the future also.

The general description of the challenges is listed below (more specific detailed guidelines shall be set down before the actual performances) :

1 Walk on water for three steps.

2 Float in air at least 60 cm above the ground for 20 seconds.

3 Stand barefoot on burning embers for 30 seconds without blistering the feet.

4 Convert water into wine, petrol or any other liquid.

5 Materialize in 10 seconds any object which we shall suggest.

6 Disappear from the negative after being photographed.

7 Disappear from a locked room.

8 Read the serial number of a sealed currency note by telepathy, clairvoyance or any such supernatural power.

9 Predict a future event to the degree of accuracy and specificity desired by us.

10 Materialize an exact replica, including the serial number of a currency note to be shown by us.

11 Cure by the power of prayer or any supernatural means without any other restrictions of diet or medication at least five of the ten patients of the disease which shall be specified by us within the period which shall also be specified.

12 State correctly within 95% accuracy the sex and living status (whether dead or alive) of 10 persons whose date, time and place of birth shall be given by us.

13 Any other supernatural, extrasensory power or any such claims of such powers will also be tested by us at our discretion and any such claims may also be referred to us and the award for each will be fixed depending on the claim.

*Conditions*

1 The challenges are confined to the actual performance of the acts mentioned above. No claims shall be entertained based on historical proof, recorded data, published or unpublished eyewitness accounts.

2 No challenges will be accepted from those of unsound mind, below the age of 21 years or on some other persons' behalf.

3 The detailed conditions shall be specified at least 24 hours before the actual performance. An agreement will be executed on a stamp paper of the required value and this shall lay down all the specific terms and conditions not mentioned herein.

4 The challenger shall place withus a deposit of Rs 1,000 which shall be refunded along with the other assets, if the challenger is victorious. In case the challenger fails, the deposit amount shall stand forfeited.

5 The challenges shall be demonstrated at Mangalore on a mutually convenient date and time. No TA, DA or remuneration of any kind shall be payable to any one in this connection. The challenger shall bear himself/herself all the expenses incurred for travel, stay or any other requirement for the performance of the challenges.

We expect a good response from the Babas, gurus, astrologers and such others having supernatural powers belonging to any community who are found in large nnmbers in each and every corner of our country.

*For the Dakshina Kannada Rationalist Association*

(Sd) Narendra Nayak
Secretary

1 February 1992

---

In science, "fact" can only mean "confirmed to such a degree that it would be perverse to withhold provisional assent." I suppose that apples might start to rise tomorrow, but the possibility does not merit equal time in physics classrooms.

*Stephen Jay Gould*

The brave alone can afford to be sincere. Compare the lion and the fox.

*Swami Vivekananda*

## ಅನುಬಂಧ ೪

# ವಿಷಯ-ಪುಟಸೂಚಿ

ವ್ಯಕ್ತಿಯು ಜನನ ಕ್ಷಣ ಮತ್ತು ನೆಲೆ ಕುರಿತಂತೆ ರಚಿಸಲಾಗುವ ವಿಶೇಷ ದಾಖಲೆಯೇ ಜಾತಕ—ಇಕೊಕಾರ್ಡಿಯೊಗ್ರಾವ್, ಎಲೆಕ್ಟ್ರೊಎನ್ಸೆಫಲೊಗ್ರಾಫ್, ಎಕ್ಸ್‌ರೇ ಪಟ ಮುಂ ದಾಖಲೆಗಳಂತೆ. ಆಕಾಶಕಾಯ ಖಗೋಳವಿಜ್ಞಾನ ಅಥವಾ ಮಾನವವಿಕಾಸ ಕುರಿತಂತೆ ಏನೂ ತಿ ಬೇಕಾಗಿರದ ಬಳಪ-ಕಡ್ಡಿ-ಕವಡೆ ಪಂಡಿತರು ಅಥವಾ ಇಂದು ಇವರ ಪ್ರತಿಬಿಂಬವಾದ (ಕಂಪ್ಯೂಟರ್) ಇದನ್ನು ತಯಾರಿಸಬಹುದು : ಜಾತಕ ಲೇಖನ.

ಜಾತಕ 'ಓದಿ' ಆ ಜಾತಕನ (= ವ್ಯಕ್ತಿಯ) ಭೂತ ವರ್ತಮಾನ ಭವಿಷ್ಯ ನುಡಿಯ ಮನೋವ್ಯಾಪಾರವನ್ನು ಜಾತಕವಾಚನ ಎನ್ನುತ್ತೇವೆ. ಜಾತಕನ ನಿಜ ಆಸಕ್ತಿ ಇರುವುದು ಭ ವರ್ತಮಾನ ವಾಚನಗಳಲ್ಲಲ್ಲ—ಭವಿಷ್ಯವಾಚನದಲ್ಲಿ! ಅರಿಯಲಾಗದುದನ್ನು ಅರಿಯಲೇಬೇ ಅದಮ್ಯ ಕುತೂಹಲ ಇಲ್ಲಿಯ ಪ್ರೇರಣೆ. ಭವಿಷ್ಯವಾಚನದ ಇನ್ನೊಂದು ಹೆಸರು ಫಲಜ್ಯೋತಿ ಈ ವೃತ್ತಿ ಹಿಡಿದಾತ ಫಲಜ್ಯೋತಿಷಿ (ಅಸ್ಟ್ರಾಲಜರ್).

ಶಾಸ್ತ್ರಗ್ರಂಥಗಳು, ಋಷಿವಾಕ್ಕುಗಳು, ಸಂತವಾಣಿಗಳು, ಸ್ವಂತಾನುಭವ, ಆಧುನಿಕ ಜ ಮತ್ತು ವೈಜ್ಞಾನಿಕ ತಂತ್ರ, ಮನೋವಿಜ್ಞಾನ ಮುಂತಾದವನ್ನು ಹದವಾಗಿ ಬೆರೆಸಿ ಫಲಜ್ಯೋ ಜಾತಕ 'ಓದು'ತ್ತಾನೆ, ಜಾತಕನ ಭೂತ ಹಾಗೂ ವರ್ತಮಾನಗಳನ್ನು ವಿಶೇಷ ಪರಿಭಾಷೆ ವಿವರಿಸಿ ಆತನ ವಿಶ್ವಾಸ ಗಳಿಸುತ್ತಾನೆ, ಹೀಗೆ ಸಿದ್ಧಪಡಿಸಲಾದ ಅನುಕೂಲ ಮಂಚಿಕೆಯಿಂದ ಭವಿ ಅಜ್ಞಾತಗಾಮಿಯಾಗಿ ಜಿಗಿದೇ ಬಿಡುತ್ತಾನೆ—ರಾಕೆಟ್ಟಿನಂತೆ!

ಮನುಕುಲದ ಜೊತೆ ಪ್ರಪಂಚಾದ್ಯಂತ ಬೆಳೆದು ಅಭಿವರ್ಧಿಸಿ ವರ್ತಮಾನದಲ್ಲಿ ಸರ್ವ ಯಾಗಿರುವ ಧಂಧೆ ಫಲಜ್ಯೋತಿಷ್ಯ. ಇದನ್ನು ನಿರಾಕರಿಸುವುದು ಸುಲಭ. ಆದರೆ ನಿವಾರಿಸುವುದ ಜನ ಸಾರ್ವಜನಿಕವಾಗಿ ಹೀಗಳೆಯುವ ಆದರೆ ಖಾಸಗಿಯಾಗಿ ಬಯಸುವ ಬೆಲೆವೆಣ್ಣು ಇದ ಖಗೋಳವಿಜ್ಞಾನಿ ನಿಕೊಲಾಸ್ ಕೊಪರ್ನಿಕಸ್ (೧೪೭೩–೧೫೪೩) ಬರೆದಿದ್ದಾನೆ.

ನಿಜ, ತನ್ನ ಭವಿಷ್ಯದ ಬಗ್ಗೆ ಆಸಕ್ತನಲ್ಲದ ವ್ಯಕ್ತಿ ಯಾರೂ ಇಲ್ಲ. ಆದರೆ ಅದನ್ನು ಅರಿಯ ಆತ ಅನುಸರಿಸುವ ಹಾದಿ ಯಾವುದು? ಇಂಥ ಬೇರೆ ಬೇರೆ ಹಾದಿಗಳ ಪೈಕಿ ಫಲಜ್ಯೋತಿಷ್ಯದ ಏನು? ಫಲಜ್ಯೋತಿಷಿಗಳು ಸಾರುವಂತೆ ಫಲಜ್ಯೋತಿಷ್ಯ ಕೂಡ ಒಂದು ವಿಜ್ಞಾನಪ್ರಕಾರ 'ಭವಿಷ್ಯವಾಚನ' ಓದಿದರೆ ನಿಮಗೇ ಉತ್ತರ ಸ್ಫುರಿಸುತ್ತದೆ.

ಇದರ ಲೇಖಕ ಮಡಿಕೇರಿಯ ಜಿ. ಟಿ. ನಾರಾಯಣರಾವ್ (೧೯೨೬) ಮದ್ರಾಸು ಎಂಎ (೧೯೪೭), ಗಣಿತೋಪನ್ಯಾಸಕ (೧೯೪೭–೬೯), ಮೈಸೂರು ವಿಶ್ವವಿದ್ಯಾನಿಲಯ ' ವಿಶ್ವಕೋಶ' ವಿಭಾಗದಲ್ಲಿ ವಿಜ್ಞಾನ ಸಂಪಾದಕ (೧೯೬೯–೮೬). ಈಗ ನಿವೃತ್ತ—ಆದ್ದ ಪೂರ್ಣಕಾಲ ಸ್ವಂತ ಆಸಕ್ತಿಗಳ ನಿರಂಕುಶ ಅನ್ವೇಷಕ. ಇವರ ಕೆಲವು ಪುಸ್ತಕಗಳು : ಆಲ್ಬ ಐನ್‌ಸ್ಟೈನ್, ಎಸ್‌ಸಿಸಿ ದಿನಗಳು, ಶ್ರೀನಿವಾಸ ರಾಮಾನುಜನ್, ಸೂಪರ್ನೋವಾ, ವೈಜ ಮನೋಧರ್ಮ (ಇದಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಎಚ್. ನರಸಿಂಹಯ್ಯ ದತ್ತಿ ಬಹು ೧೯೨ ಬಂದಿದೆ).

---

ಮೌಲ್ಯಯುತ ಗ್ರಂಥಗಳ ಪ್ರಕಾಶಕರು ದಾಸ್ತಾನಿಗರು ಮತ್ತು ಮಾರಾಟಗಾರ

**ದತ್ತಾತ್ರೇಯ ಪ್ರಕಾಶನ * ಅತ್ರಿ ಬುಕ್ ಸೆಂಟರ್ * ಶರಾವತಿ ಕಟ್ಟ**

**ಬಲ್ಮಠ * ಮಂಗಳೂರು ೫೭೫ ೦೦೧**

---

ರೂ ೧೫

ಪ್ರಕಟಣೆ ಸಂ